ಶ್ರೀ ಹರಿದಾಸ ವಿಜಯಮಾಲಾ ಐದನೆಯ ಮೊಗ್ಗೆ

# ಭಕ್ತ ಶ್ರೀಪಾದರಾಜರು



ಲೇಖಕರು ಮತ್ತು ಪ್ರಕಾಶಕರು:
**ಹಂಡೆ ಗುರು ವೇದವ್ಯಾಸ ದಾಸರು,**
ಕೀರ್ತನಾಲಂಕಾರ, ಉಡುಪಿ.

ಮುದ್ರಕರು:
**ಮೆಜೆಸ್ಟಿಕ್ ಪ್ರೆಸ್, ಉಡುಪಿ.**

**1957**



ಬೆಲೆ: ೦—೧೨—೦

# ಅರ್ಪಣೆ

ನಮ್ಮ ಮಾಲಿಯ ಈ ಮೊಗ್ಗೆಯ ಪ್ರಕಾಶನಕ್ಕೆ **ಭಕ್ತ ಗೋವಿಂದ ದಾಸರ** ಸುಪುತ್ರರು ತಮ್ಮ ತೀರ್ಥರೂಪರ ಸ್ಮರಣಾರ್ಥವಾಗಿ ವಿಶೇಷ ಧನಸಹಾಯವನ್ನು ನೀಡಿರುವರು.

ಈ ಮೊಗ್ಗೆಯು, ಕೇವಲ ಇತ್ತೀಚೆಗೆ ನಮ್ಮ ಉಡುಪಿ ಶ್ರೀಕೃಷ್ಣನನ್ನು ಭಕ್ತಿಯಿಂದ ಗಾನರಸದಿಂದ ಕೂಡಿ ಹಾಡಿ ಒಲಿಸಿಕೊಂಡು ಬಾಳನ್ನು ಶ್ರೀ ಹರಿಸೇವೆಗೇ ವಿನಿಯೋಗಿಸಿ ಶ್ರೀಹರಿಸಾನ್ನಿಧ್ಯವನ್ನು ಸೇರಿ ತಮ್ಮ ಕೀರ್ತಿ ಶರೀರದಲ್ಲಿ ನಾಡಿನಾದ್ಯಂತ ಕಂಗೊಳಿಸುತ್ತಿರುವ **"ಭಕ್ತ ಗೋವಿಂದ ದಾಸರು"** ಇವರ ಸ್ಮರಣಾರ್ಥವಾಗಿ ಈ ಮಹಾನುಭಾವರ ಅಂತರ್ಗತನಾದ ಶ್ರೀಕೃಷ್ಣನಿಗೆ ಅರ್ಪಿಸಿರುತ್ತೇವೆ.

ಶ್ರೀ ಗೋವಿಂದ ದಾಸರ ಸುಪುತ್ರರು ತಮ್ಮ ಕುತ್ತೆತ್ತೂರಿನ **"ಗೋವಿಂದ ಭವನ"**ದಲ್ಲಿ ಸಕಲ ಸಂಪದ್ಭರಿತರಾಗಿ ಮುಖ್ಯವಾಗಿ ಶ್ರೀಹರಿಗುರುಗಳ ಸೇವಾ ತತ್ಪರರಾಗಿ ಚಿರಕಾಲ ಪುತ್ರಮಿತ್ರ ಬಾಂಧವರೊಡನೆ ವಿಷ್ಣು ಭಕ್ತರ ಸಮಾಗಮದಿಂದ ಆನಂದದಿಂದಿರಲಿ ಎಂದು ನಾವು ರಂಗವಿಠ್ಠಲನನ್ನು ಪ್ರಾರ್ಥಿಸುತ್ತೇವೆ.

**ಪ್ರಕಾಶಕ-ಲೇಖಕ.**

॥ ಶ್ರೀ ಕೃಷ್ಣಾಯ ನಮಃ ॥



## ನಾಂದಿ

ದ್ರೌಪದಿಯ ಭಯವ ಪರಿಹರಿಸಿದವನಾರೈ
ಆ ಪರೀಕ್ಷಿತನ ಭವಭಂಜನನಾರೈ
ತಾಪಸರಿಗಸುರರಿಂದ ಬಂದ ಪರಿಪರಿಯ
ಆಪತ್ತುಗಳನೆಲ್ಲ ಖಂಡಿಸಿದನಾರೈ
ಶ್ರೀಪತಿ ಹಯವದನನೊಬ್ಬನೆ ತನ್ನವರ
ತಾಪತ್ರಯವ ಬಿಡಿಸಿ ತಕ್ಕೈಸಿಕೊಂಬ

— ಶ್ರೀವಾದಿರಾಜ ಸ್ವಾಮಿಗಳು.



ಶ್ರೀ ಗೋಪಿಕಾಪತಿ ನಿವೇದಿತ ಷಷ್ಟಿ ಶಾಖಾ
ಮುಖ್ಯೋರು ಭೋಜನ ವಿದೂಷಣ ತತ್ಪರಾಣಾಂ
ಸಂದರ್ಶಿತೋರು ನಿಜಕಕ್ಷಿ ಗತಾರ್ದ್ರ ಶಾಖಾ
ಶ್ರೀಪಾದರಾಜ ಗುರವೇಸ್ತು ನಮಃ ಶುಭಾಯ ॥ ೧ ॥

# ಲೇಖಕನ ವಿಜ್ಞಾಪನೆ



ಶ್ರೀ ಶ್ರೀಪಾದರಾಜರ ಚರಿತ್ರೆಯನ್ನು ಆದಷ್ಟು ಸರಳವಾಗಿ ಸರ್ವ ಸುಜನರಿಗೂ ಉಪಕಾರವಾಗಲೆಂಬ ದೃಷ್ಟಿಯಿಂದ ಬರೆದಿರುತ್ತೇನೆ.

ಎಲ್ಲರೂ ಓದಿ ರಂಗ ವಿಠ್ಠಲನ ಕೃಪೆಗೆ ಪಾತ್ರರಾದರೆ ನಾನೂ ಪಾತ್ರನಾದಂತೆ.

ಈ ಮೊಗ್ಗೆಯು ಪ್ರಕಟವಾಗಲು ಸಪ್ರೇಮಪೂರ್ವಕ ಸಹಾಯವನ್ನು ನೀಡಿದ ಮತ್ತು—ಇಂತಹ ಅನೇಕ ಧಾರ್ಮಿಕ ಕಾರ್ಯಗಳನ್ನು ತಮ್ಮ ಸ್ವಂತ ಕೆಲಸವೆಂದು ತಿಳಿದು ಸರ್ವ ವಿಧದಿಂದಲೂ ಸಹಾಯ ಸಹಾನುಭೂತಿಗಳನ್ನು ನೀಡುತ್ತಿರುವ "ವೇ|| ಗೋವಿಂದದಾಸರ ಸುಪುತ್ರರು ಗೋವಿಂದ ಭವನ ಕುತ್ತೆತ್ತೂರು"—ಇವರಿಗೆ ಶ್ರೀ ರಂಗ ವಿಠ್ಠಲನು ತನ್ನ ಪರಮ ಮಂಗಳ ನಾಮಸ್ಮರಣೆಯ ಆನಂದವನ್ನೂ ಸಕಲ ಐಹಿಕಾಮುಷ್ಮಿಕ ಸುಫಲಗಳನ್ನು ಸದಾ ನೀಡಲೆಂದು ಅವನ ಅಡಿದಾವರೆಗಳಲ್ಲಿ ಮತ್ತೊಮ್ಮೆ ಪ್ರಾರ್ಥಿಸುತ್ತೇನೆ.

ಸಕಾಲದಲ್ಲಿ ನಮ್ಮ ಋನೆಯ ಮೊಗ್ಗೆಯನ್ನು ಸುಂದರವಾಗಿ ಮುದ್ರಿಸಿ ಕೊಟ್ಟ ಮೆಜಿಸ್ಟಿಕ್ ಪ್ರೆಸ್ಸಿನ ಮಾಲಕರಿಗೂ ಅವರ ಸಹಾಯಕರಿಗೂ ನನ್ನ ಧನ್ಯವಾದಗಳು.

ತನುಮನಧನದಿಂದ ಸಹಾಯ ನೀಡುತ್ತಿರುವ ಸಕಲರಿಗೂ ನನ್ನ ಧನ್ಯವಾದಗಳು.

ಉಡುಪಿ.<br>
ತಾ. 5-4-57

ಹಂಡೆ ಗುರುವೇದವ್ಯಾಸದಾಸ

# ಲೇಖಕರ ಇತರ ಗ್ರಂಥಗಳು—
# ಮತ್ತು ಅವುಗಳ ರಚನೆಯ ಬಗ್ಗೆ ವಿದ್ವಾಂಸರ ಅಭಿಪ್ರಾಯಗಳು

ನವಭಾರತ. 20—8 -1956ರಲ್ಲಿ—

**'ಭಕ್ತ ರಾಘವೇಂದ್ರರು'** —'......ಲೇಖಕರು ಗುರುಮಾಹಾತ್ಮೆಯನ್ನು ಕೊಂಡಾಡಿದ್ದಾರೆ. ಜೀವನವು ಪರಿಪೂರ್ಣವಾಗಬೇಕಾದರೆ ಮಾನವನಲ್ಲಿ ಮಾನವೀಯತೆಯೊಡಮೂಡಿ ಮಾಹಾತ್ಮ್ಯ ಜ್ಞಾನಪೂರ್ವಕವಾದ ಸುದೃಢ ಸ್ನೇಹವು ಮೂಡಿ ಬರಬೇಕಾದರೆ - ಜನತೆಯೊಲವು ಭಕ್ತಿಮಾರ್ಗ ಸಂಚಾರೀಕೃತಿಗಳಲ್ಲೂ ತೇಲಿಬರಬೇಕು.........

ಲೇಖಕರ ಸುಪುಷ್ಟ ಭಾಷಾ ಸಂಪನ್ನ ಚರಿತ ನಿರೂಪಣವು ಕಳೆಯೇರಿ ನಿಂತಿದೆ. ಜೀವನಕ್ಕನುವಾದ ವಿಭಾಗ ರಚನೆ, ಸಮರ್ಥನೆ, ಆಧಾರ ನಿರೂಪಣೆ ಇವುಗಳಿಂದ ಈ ಕಿರು ಹೊತ್ತಿಗೆಯು ಸಂಗ್ರಾಹ್ಯ ವಿದೆಯೆನ್ನಬೇಕು.

ರಾಯಭಾರಿ —10 -10—1956ರಲ್ಲಿ—

**"ಭಕ್ತ ರಾಘವೇಂದ್ರರು"** '......ಲೇಖಕರು ಭಕ್ತ ರಾಘವೇಂದ್ರರ ಜೀವನ ಚರಿತ್ರೆಯನ್ನು ನಿರೂಪಿಸಿ ತದಂತರ್ಗತ ಘಟನಾ ವಿಶೇಷಗಳನ್ನು ಒರೆಗಾಣಿಸಿ ಸಂದರ್ಭೋಪಯುಕ್ತ ಸಮರ್ಥನೆಗಳೊಡನೆ ಕೃತಿಗೆ ಪೂರ್ಣತೆಯನ್ನಿತ್ತಿದ್ದಾರೆ..............."

ವಿಮರ್ಶಕರು— ಕೆ. ಎಸ್. ಶರ್ಮಾ, ಕಾಸರಗೋಡು.

ನವಭಾರತ—31—12—1956ರಲ್ಲಿ—

**"ಭಕ್ತ ಪುರಂದರದಾಸರು"** '.........ಪ್ರಸ್ತುತ ಗ್ರಂಥದಲ್ಲಿ ಶ್ರೀ ಆಚಾರ್ಯರು ಶ್ರೀ ಪುರಂದರ ದಾಸರ ಪೂರ್ವಜೀವನ ಹಾಗೂ ತದನಂತರದ ನ್ಯಾಸ ಜೀವನ ಇವುಗಳಿಗೆ ಸಂಬಂಧಿಸಿದ ಚರಿತ್ರೆಯನ್ನು ಓರಣವಾಗಿ ರೂಪಿಸಿ ಭಕ್ತಾಗ್ರೇಸರರಾದ ವ್ಯಾಸರಾಯರ ಹಾಗೂ ಪುರಂದರ ದಾಸರ ಭಕ್ತಿಭಾವ ಸಂಪನ್ನವಾದ ಗತಿಯಲ್ಲಿ ಅರಳಿದ ಹಲವಾರು ಸಂದರ್ಭಗಳನ್ನು ಉಲ್ಲೇಖಿಸಿದ್ದಾರೆ. ಮಾತ್ರವಲ್ಲದೆ ಅವರು ನಾಡಿಗಾಗಿ ನೀಡಿದ ಉಪದೇಶ ಸಂಗ್ರಹವನ್ನು ಅಲ್ಲಲ್ಲಿ ಕೊಟ್ಟು ಸಂದರ್ಭಾನುಗುಣವಾಗಿ ಅಲ್ಲಲ್ಲಿ ದಾಸರ ಕೀರ್ತನೆಗಳನ್ನು ಜತೆಗೂಳಿಸಿ ಜೀವನವನ್ನು ನಿರೂಪಿಸಿರುವ ಬಗೆಯಂದು ಸುತರಾಂ ಶ್ಲಾಘನೀಯವಿದೆ. ಅಲ್ಲದೆ ಗ್ರಂಥಾದಿಯಲ್ಲಿ ಕಾಣಿಸುವ ಪೂರ್ವಪೀಠಿಕೆಯು ಆಕರ್ಷಣೀಯವಿದ್ದು ಈ ಬಗೆಯ ಗ್ರಂಥ ವಿಧಾನ ಸೌಧಕ್ಕೆ ಕಲಶವಿರಿಸಿದಂತಿದೆ. ಉತ್ತಮ ಭಾಷಾ ಶೈಲಿಗಳಿಂದಲಂಕೃತವಾಗಿ ಜೀವನ ಪರಿಚಯ ಸಂಪ್ರದಾಯಕ್ಕೆ ಒಪ್ಪುವ ಬಗೆಯಲ್ಲಿ ಸಾಗಿನಿಂತ ಕೃತಿಯಿದನ್ನು ಒಲವಿನಿಂದ ಓಗೊಡೋಣ.

ವಿಮರ್ಶಕರು— ಕೆ. ಎಸ್. ಶರ್ಮಾ, ಕಾಸರಗೋಡು

# ಪೂರ್ವ ಪೀಠಿಕೆಯು



ಶ್ರೀಮದ್ಭಾವಿಸಮೀರ ಪದಾಧಿರೂಢರಾಗಿರುವ ಶ್ರೀಮದ್ವಾದಿರಾಜ ಪೂಜ್ಯ ಚರಣರು **'ಮಧ್ವಾಂತರ್ಗತ ವೇದವ್ಯಾಸ'** ಎಂಬುವ ಬಾದರಾಯಣ ದೇವರ ಸ್ತೋತ್ರ ಪದ್ಯದಲ್ಲಿ **'ಕ್ರಿಮಿಯಿಂದ ರಾಜ್ಯವಾಳಿಸಿದೆ-ಜಗತ್ಸ್ವಾಮಿ ಚರ್ಯವ ನೀ ತೋರಿಸಿದೆ'** ಎಂದು ಹಾಡಿರುವರು. ಇದಕ್ಕೆ ಆಧಾರವೇನೆಂದರೆ ವೇದಾರ್ಥನಿರ್ಣಯ ರೂಪವಾಗಿ ಸಕಲಶಾಸ್ತ್ರಾರ್ಥಗಳನ್ನು ಸದೃಷ್ಟಾಂತವಾಗಿ ನಿರೂಪಿಸುವ ಶ್ರೀಮನ್ಮಹಾಭಾರತ ಕಥಾವಸ್ತುವಿಗೆ ನಿರ್ಣಯ ರೂಪವಾಗಿ ಶ್ರೀಮನ್ಮಧ್ವಾಚಾರ್ಯ ಗುರುವರ್ಯರಿಂದ ರಚಿತವಾದ ಮಹಾಭಾರತ ತಾತ್ಪರ್ಯ ನಿರ್ಣಯದ—

ಭವಸ್ವರಾಜಾ ಕುಶರೀರಮೇತತ್ ।
ತ್ಯಕ್ತ್ವೇತಿ ನೈಚ್ಛತ್ತದಸೌ ತತಸ್ತಂ ॥
ಅತ್ಯಕ್ತ ದೇಹಂ ನೃಪತಿಂ ಚಕಾರ ।
ಪುರಾ ಸ್ವಭಕ್ತಂ ವೃಷಲಂ ಸುಲುಬ್ಧವ್ ॥

ಅ ೧೦-ಶ್ಲೋ ೬೩

ಒಂದುದಿನ ಶ್ರೀ ವೇದವ್ಯಾಸದೇವರು ಸಂಚಾರಮಾಡಿಕೊಂಡು ಬರುತ್ತಿರುವಾಗ ಒಂದು ಕೀಟವು (ವನಿಕೆ ಮುಂಡೆ ಹುಳವು; ಇದಕ್ಕೆ ಚಾರಟೆ ಎಂದೂ ಹೇಳುವರು.) ತಮ್ಮ ಪಾದಕ್ಕೆ ಸ್ಪರ್ಶವಾಗಲು ತಮ್ಮ ಪಾದ ಸ್ಪರ್ಶವಾದುದು ನಿರರ್ಥಕವಾಗಬಾರದೆಂದು ಆ ಕೀಟದಿಂದಲೇ ರಾಜ್ಯವಾಳಿಸಿ ಸಕಲ ಪೃಥ್ವೀಪತಿಗಳಿಂದ ಕಪ್ಪಕಾಣಿಕೆಗಳನ್ನು ಕೊಡಿಸಿ ಸತ್ಸಾಧನೆಯನ್ನು ಮಾಡಿಸಿ ಮುಕ್ತಿಯನ್ನು ಕೊಟ್ಟರು.

ಅಂದ ಮೇಲೆ ಶ್ರೀಹರಿಯ ಅನುಗ್ರಹವಾದರೆ ಯಾವುದು ತಾನೇ ಅಸಾಧ್ಯ!

ಅರ್ಜುನನಲ್ಲಿ ತನ್ನ ನರಾವೇಶವನ್ನಿಟ್ಟು ಅವನಿಗೆ **ಭಾರತವೀರನೆಂಬ** ಖ್ಯಾತಿಯನ್ನು ಕೊಡಿಸಿದನು.

ನಿರಕ್ಷರಕುಕ್ಷಿಯಾಗಿ ಕುದುರೆ ಸವಾರನಾಗಿದ್ದ ಧೋಂಡೂ ರಘು ನಾಥರಾಯನಿಂದ ದೇವತೆಗಳಿಂದಲೂ ಅರ್ಥಮಾಡಲಾಗದ ಮಹಾಗ್ರಂಥ ಗಳಿಗೆ ವ್ಯಾಖ್ಯಾನ ಬರೆಸಿ † **ಟೀಕಾಕೃತ್ಪಾದರೆಂಬುವ** ಕೀರ್ತಿಯನ್ನು ಕೊಡಿಸಿದನು.

ಅಂತೆಯೇ ದನಗಳನ್ನು ಮೇಯಿಸುತ್ತಿದ್ದ ಹುಡುಗನನ್ನು **ಶ್ರೀಪಾದ ರಾಜ ಗುರು ಸಾರ್ವಭೌಮರು** ಎನಿಸಿದನು.

ಇವರೇ ನಮ್ಮ ಮೊಗ್ಗೆಯ ಕಥಾನಾಯಕರು.
ಶ್ರೀ ಪಾದರಾಜರು ಮಹಾಭೋಗಿಗಳು.

**ಅನಿಷಿದ್ಧ ಸುಖತ್ಯಾಗೀ ಪಶುರೇವ ನ ಸಂಶಯಃ**
**ನಿಷಿದ್ಧ ಸುಖಭೋಕ್ತಾಚ ಪಶುರೇವ ನ ಸಂಶಯಃ ॥'**

—ಮಾರ್ಕಾಂಡೇಯ ಪುರಾಣ ವೆಂಕಟೇಶ ಮಾಹಾತ್ಮ್ಯೆಯಿಂದ-೩೫—೩

'(ಶಾಸ್ತ್ರದಲ್ಲಿ) ನಿಷಿದ್ಧವಲ್ಲದ ಸುಖಗಳನ್ನು ತ್ಯಜಿಸಿದವನು ಪಶುವೇ ಸರಿ ಸಂಶಯವಿಲ್ಲ. (ಹಾಗೇ ಶಾಸ್ತ್ರದಲ್ಲಿ) ನಿಷಿದ್ಧವಾದ ಸುಖಗಳನ್ನು ಭೋಗಿಸಿ ದವನೂ ಕೂಡಾ ಪಶುವೇಸರಿ ಸಂಶಯವಿಲ್ಲ'

ಆದುದರಿಂದ ರಂಗವಿಠ್ಠಲನ ಮೆಚ್ಚುಗೆಗೆ ಪಾತ್ರರಾದ ನಮ್ಮ ಶ್ರೀಪಾದ ರಾಜರು ಹರಿ ಪ್ರೀತಿಕರ ಸುಖಗಳ ಅನುಭವದಲ್ಲಿ ತಮ್ಮ ಅವತಾರ ಕಾರ್ಯ ವನ್ನು ಯಶಸ್ವಿಗೊಳಿಸಿ ಕರ್ಣಾಟಕ ಭಕ್ತರಿಗೇ ಆದರ್ಶರಾಗಿ ತಮ್ಮ ಸ್ಮರಣೆ ಯನ್ನು ಪ್ರಾತಃಕಾಲದಲ್ಲಿ ಮಾಡಿದ ಸುಜನರಿಗೆಲ್ಲಾ ರಂಗವಿಠಲನ ಪೂರ್ಣಕೃಪಾಪಾತ್ರರಾದುದರಿಂದ ಮಹಾಸುಖವನ್ನು ಕರುಣಿಸುವ ಕರುಣಿಗಳು.

---

† ಟೀಕಾಕೃತ್ಪಾದರು ಇಂದ್ರದೇವರ ಅಂಶಸಂಭೂತರೆಂದೂ ಇವರಲ್ಲಿ ವಾಯುದೇವರ ಮತ್ತು ಶೇಷದೇವರ ಆವೇಶವಿತ್ತೆಂದೂ ಅಪರೋಕ್ಷಿಗಳ ಕೃತಿಗ ಳಿಂದ ತಿಳಿದುಬರುವದು. ಮಧ್ವಶಾಸ್ತ್ರಗಳಿಗೆ ಮುಖ್ಯವಾದ ಟಿಪ್ಪಣಿಕಾರರು ಇವರೇ.



॥ ಶ್ರೀಕೃಷ್ಣಾಯ ನಮಃ ॥

॥ ಶ್ರೀ ಭಾರತೀರಮಣಾಯ ನಮಃ ॥

॥ ಶ್ರೀ ಶ್ರೀಪಾದರಾಜೋ ವಿಜಯತೇ ॥

# ಭಕ್ತ ಶ್ರೀಪಾದರಾಜರು

## ಜನನ ಮತ್ತು ಬಾಲ್ಯ

ಶ್ರೀಪಾದರಾಜರು ಹೆಸರಿಗೆ ತಕ್ಕಂತೆ ಮಹಾಭೋಗಿಗಳು. ಭಕ್ತರ ಇಷ್ಟಾರ್ಥಗಳನ್ನು ಸಲಿಸುವ ತ್ಯಾಗಿಗಳು. ಶ್ರೀಹರಿಯ ಪಾದಾರವಿಂದಗಳಲ್ಲಿ ಸದಾ ಪ್ರೇಮವುಳ್ಳ ಅನುರಾಗಿಗಳು. ಶೀತೋಷ್ಣ ಸುಖದುಃಖಗಳನ್ನು ಸಮಾನವಾಗಿ ಎಣಿಸುವ ವಿರಾಗಿಗಳೂ ಆಗಿದ್ದರು.

ಶ್ರೀಪಾದರಾಜರು ಎಂಥಾ ವಿರಕ್ತರೆಂಬುವುದಕ್ಕೆ ಇವರ ಬೃಂದಾವನಕ್ಕೆ ಮೇಲು ಛಾವಣಿಯನ್ನು ಮಾಡಿಸುವುದಾಗಿ ಭಕ್ತರು ಪ್ರಯತ್ನ ಪಡಲು 'ನಮಗೆ ಛಾವಣಿಯ ಅವಶ್ಯವಿಲ್ಲ. ನಾವು ಹೀಗೇ ತಪೋನಿರತರಾಗಿರುವೆವೆ'ಂದು ಸೂಚಿಸಿದರೆಂಬುದಾಗಿ ಜನಜನಿತವಾದ ಪ್ರತೀತಿ ಇದೆ. ಇಂದಿಗೂ ಬೃಂದಾವನಕ್ಕೆ ಛಾವಣಿಯಿಲ್ಲದಿರುವುದು ಪ್ರತ್ಯಕ್ಷವಾಗಿದೆ.

ಈ ಮಹಾನುಭಾವರ ನಾಮಸ್ಮರಣೆಯನ್ನು ಪ್ರಾತಃಕಾಲದಲ್ಲಿ ಮಾಡಿದರೆ ಆ ದಿವಸ ಮೃಷ್ಟಾನ್ನ ಭೋಜನವು ಲಭಿಸುವುದೆಂಬುದು ಇಂದಿಗೂ

ಕುರುಡು ನಂಬಿಕೆಯಾಗಿರದೆ ಅನೇಕರ ಅನುಭವಕ್ಕೆ ಬರುತ್ತಿರುವುದು ಈ ಪುಣ್ಯಶ್ಲೋಕರ ಮಹಿಮೆಗೆ ಪ್ರತ್ಯಕ್ಷ ಪ್ರಮಾಣವಾಗಿದೆ.

ಶ್ರೀಮದಾಚಾರ್ಯರಿಂದ ಪುನಃ ಉಜ್ಜೀವಿತವಾದ ಹರಿದಾಸ ಪಂಥವು ಆಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀನರಹರಿ ತೀರ್ಥರ ಕಾಲದಲ್ಲಿ ಮತ್ತು ವಿಶೇಷವಾಗಿ ಪ್ರಚಾರಕ್ಕೆ ಬಂತು. ಶ್ರೀನರಹರಿ ತೀರ್ಥರ ಪದಗಳು ನಾಲ್ಕಾರು ಪ್ರಚಾರದಲ್ಲಿವೆ.

ಹರಿದಾಸ ಪಂಥದಲ್ಲಿ ಶ್ರೀನರಹರಿ ತೀರ್ಥರ ನಂತರ ಶ್ರೀಪಾದರಾಜರೇ ಪ್ರಸಿದ್ಧರು. ಇವರ ಹೆಸರು ಅಮರವಾದುದು. ಹರಿದಾಸರ ಗುಣಗಾನವನ್ನು ಮಾಡಲು ಹೊರಟರೆ **'ನಮಃ ಶ್ರೀಪಾದರಾಜಾಯ'** ಎಂಬುದಾಗಿ ಪ್ರಥಮ ವಂದನವು ಸಂಪ್ರದಾಯಜ್ಞರಿಂದ ಇವರಿಗೆ ಇಂದಿಗೂ ಸಲ್ಲುತ್ತಿದೆ. ಇದಕ್ಕೆ ಕಾರಣವೇನೆಂದರೆ ನರಹರಿತೀರ್ಥರಿಂದ ಆಚಾರ್ಯರ ಇಚ್ಛಾನುಸಾರವಾಗಿ ಹರಿದಾಸ ಪಂಥವು ಪ್ರಚುರವಾಗತೊಡಗಿದರೂ ಶ್ರೀಪಾದರಾಜರ ಕಾಲದಲ್ಲಿ ಈ ಪಂಥ ಪ್ರಚಾರಕ್ಕೆ ಬಂದ ಎರಡುತೊಡರುಗಳನ್ನು, ಚರಿತ್ರೆಯ ದೃಷ್ಟಿಯಿಂದಲೂ ಪರಿಶೀಲಿಸಿದರೆ ಆಕಾಲದಲ್ಲಿ ಬಂದ ವಿಘ್ನಗಳಿಗೆಲ್ಲಾ ಎದೆಗೊಟ್ಟು, ತಮ್ಮ ಸದುದ್ದೇಶವನ್ನು ಸಿದ್ಧಿಸಿಕೊಂಡ ಇವರ ದೃಢತೆಯೇ ಇದಕ್ಕೆ ಕಾರಣವಾಗಿದೆ. ರಾವಣನೂರಲ್ಲಿ ರಾಮನವಮಿ ಉತ್ಸವ ವೈಭವದಿಂದ ನಡೆಸಿದಂಥಾ ಸಾಹಸವು ಇವರದು. ಹಿಂದುಗಳಿಗೆ ಗ್ರಹಣ ಹಿಡಿದಕಾಲ. ರಾಜಕೀಯ ದೃಷ್ಟಿಯಿಂದಲೂ ರಾಜ್ಯದ ಆಡಳಿತವು ಸುವ್ಯವಸ್ಥಿತವಾಗಿರದೆ ಅಲ್ಲಲ್ಲಿ ಅನ್ಯಧರ್ಮಿಗಳು ನಮ್ಮ ಪವಿತ್ರ ಧರ್ಮವನ್ನು ವಾಚಾಮಗೋಚರವಾಗಿ ನಿಂದಿಸುತ್ತಾ ನಮ್ಮ ಧರ್ಮಾವಲಂಬಿಗಳನ್ನೂ. ನಮ್ಮ ಧರ್ಮದ್ಯೋತಕಗಳಾದ ಗುಡಿಗೋಪುರಗಳನ್ನೂ ಕೆಡಿಸುತ್ತಾ ವಿಶೇಷ ಹಾವಳಿಮಾಡುತ್ತಿದ್ದ ಕಾಲವದು. ಅಲ್ಲದೆ ತುಂಡರಸರುಗಳ ಬಂಡಾಯದ ಗಡಿಬಿಡಿಯ ಕಾಲವದು. ಇಂತಹ ಬಿಕ್ಕಟ್ಟಿನ ಪ್ರಸಂಗದಲ್ಲಿಯೂ ಸನ್ಯಾಸಿಗಳಾದ ಇವರು ಮೂಗ್ಹಿಡಿದುಕೊಂಡು ಮೂಲೆಯಲ್ಲಿ ಕೂಡದೆ ತಮ್ಮ ಪ್ರಚಾರ ಕಾರ್ಯವನ್ನು ಧೈರ್ಯದಿಂದ ಸಾಕಷ್ಟು ನಡೆಸಿರುವರು.

ಶ್ರೀಪಾದರಾಜರು ಇಂತಹ ಮಹತ್ಕಾರ್ಯವನ್ನು ಸಾಧಿಸಲು ಹೇಗೆ ಸಾಧ್ಯವಾಯಿತೆಂದರೆ ಇವರನ್ನು-**ಧ್ರುವ ಮಹಾರಾಜರ** ಅಂಶ ಸಂಭೂತರೆಂದು ಅಪರೋಕ್ಷಿಗಳಾದ ದಾಸರು ತಿಳಿಸಿರುವರು.

**'ವರಧ್ರುವನ ಅವತಾರವೇ ಶ್ರೀಪಾದರಾಜರು**
ಶ್ರೀರಂಗವಿಠಲನ ಉಪಾಸಕರು'

ಎಂಬುದಾಗಿ ಶ್ರೀ ಗೋಪಾಲದಾಸರು ಹೇಳಿರುವರು. ಈ ಪುಣ್ಯಾ ಪುರುಷರು ಪೂರ್ವದಲ್ಲಿ ಒಬ್ಬ ರಾಜನಾಗಿದ್ದು ಬಹುಕಾಲ ದೇವರನ್ನು ಆರಾಧಿಸಿದರೂ ದೇವರು ಪ್ರಸನ್ನನಾಗಲಿಲ್ಲವೆಂದು ಸಿಟ್ಟನಿಂದ ದೇವರಿಗೆ ತರ್ಪಣಕೊಟ್ಟು ಬಿಟ್ಟರು. ಆ ಮೇಲೆ ದೇಹತ್ಯಾಗ ಮಾಡಿದರು. ದೇಹ ತ್ಯಾಗ ಮಾಡುವಾಗ ತೊಂಭತ್ತೈದು ವರ್ಷಗಳು. ಆ ಮೇಲೆ ಸುನೀತಿಗೆ ಉತ್ಥಾನಪಾದನಲ್ಲಿ ಧ್ರುವರಾಯನಾಗಿ ಅವತರಿಸಿ ಐದು ವರ್ಷದ ಬಾಲಕನಿರುವಾಗಲೇ ಯಾರು ತಡೆದರೂ ನಿಲ್ಲದೆ ಕಾಡಿಗೆ ಹೋಗಿ ನಾರದರಿಂದ ಉಪದಿಷ್ಟವಾದ **'ಓಂ ನಮೋ ಭಗವತೇ ವಾಸುದೇವಾಯ'** ಎಂಬ ದ್ವಾದಶಾಕ್ಷರೀ ಮಂತ್ರವನ್ನು ಜಪಿಸುತ್ತಾ ಘೋರ ತಪವನ್ನಾಚರಿಸಿ ಉತ್ತಮ ಶ್ಲೋಕನಾದ ನಾರಾಯಣನನ್ನು ಪ್ರಸನ್ನೀಕರಿಸಿಕೊಂಡವರು. ಆದುದರಿಂದ ತಾವು ಕೈಗೊಂಡ ಕಾರ್ಯವನ್ನು ಬಿಡದೆ ಸಾಧಿಸುವುದೇ ಇವರ ನೈಜ ಸ್ವಭಾವ. ಭಗವತ್ಪ್ರೀತಿಕರ ಕಾರ್ಯಗಳನ್ನು ಆರಂಭಿಸಿ ಬಿಡದಿರುವುದೇ ಭಾಗವತರ ಲಕ್ಷಣ—

**ಆರಭ್ಯತೇ ನ ಖಲು ವಿಘ್ನ ಭಯೇನ ನೀಚೈಃ**
**ಆರಭ್ಯ ವಿಘ್ನ ವಿಹತಾವಿರಮನ್ತಿ ಮಧ್ಯಾಃ ॥**
**ವಿಘ್ನೈಃ ಪುನಃ ಪುನರಪಿ ಪ್ರತಿಹನ್ಯಮಾನಾಃ**
**ಪ್ರಾರಭ್ಯಚೋತ್ತಮಜನಾ ನ ಪರಿತ್ಯಜನ್ತಿ ॥**

—ಭರ್ತೃಹರಿ

ಎಂದು ಕವಿಯೂ ಹೇಳಿರುವನು. ಆರಂಭಿಸಿದ ಕಾರ್ಯವನ್ನು ಏನು ವಿಘ್ನಗಳು ಬಂದರೂ ಬಿಡದಿರುವುದೇ ಧೀರರ ಲಕ್ಷಣ.

**'ಬಿಡರು ತಮ್ಮ ಸ್ವಧರ್ಮಂಗಳೇನು ಬಂದರು'** ಎಂಬುದು ಭಾಗವತರ ಲಕ್ಷಣವೆಂದು ಶ್ರೀಮಜ್ಜಗನ್ನಾಥದಾಸಾರ್ಯರ ವಚನ. ಎಲ್ಲಕ್ಕಿಂತಲೂ ಮುಖ್ಯವಾಗಿ—

**ಹತೋವಾಪ್ರಾಪ್ಸ್ಯಸಿಸ್ವರ್ಗಂ ಜಿತ್ವಾವಾಭೋಕ್ಷಸೇಮಹೀಮ್**
**ತಸ್ಮಾದುತ್ತಿಷ್ಠ ಕೌನ್ತೇಯ ಯುದ್ಧಾಯ ಕೃತ ನಿಶ್ಚಯಃ ॥**

**ಗೀತಾ—೩೭-೨**

'ಧರ್ಮಯುದ್ಧದಲ್ಲಿ ಮಡಿದರೆ ಸ್ವರ್ಗವನ್ನು ಸೇರುವಿ—ಜಯಿಸಿದರೆ ಧರೆಯನ್ನಾಳುವಿ ಆದುದರಿಂದ ನಿನ್ನ ಧರ್ಮವಾದ ಯುದ್ಧಕರ್ಮವನ್ನು ಮಾಡಲು ನಿಶ್ಚಯಿಸಿ, ಏಳು ರಣಕ್ಕೆ ಸಿದ್ಧನಾಗು' ಎಂಬುದಾಗಿ ಶ್ರೀ ಕೃಷ್ಣನು 'ತನತನಗೆ ಹೇಳಿದ ಧರ್ಮಕರ್ಮಗಳನ್ನು ಬಿಡದೆ ನಿಷ್ಕಾಮನೆಯಿಂದ ನಡೆಸುತ್ತಾ ನನಗರ್ಪಿಸುತ್ತಿರುವನೇ ನನ್ನ ಭಕ್ತ'ನೆಂದು ಸಾರಿರುವನಷ್ಟೆ! ಭಗವಂತನ ಆಜ್ಞೆಯನ್ನು ಅಕ್ಷರಶಃ ಪಾಲಿಸಿದವರು ನಮ್ಮ ಶ್ರೀಪಾದರಾಜರು. ಮತ್ತು ಇವರಂತೆ ಭಗವದಾಜ್ಞಾಪರಿಪಾಲನೆಯಲ್ಲಿ ಬದ್ಧದೀಕ್ಷೆಯುಳ್ಳವರ್‍ಯಾರೋ ಅವರು. ಮೇಲೆ ವಿವರಿಸಿದ ಎಲ್ಲಾ ಕಾರಣಗಳಿಂದಾಗಿಯೂ ಮುಂದೆ ಕಂಡುಬರುವ ಕಥಾ ಪ್ರಸಂಗಗಳಿಂದಲೂ ನಮ್ಮ ಈ ಕಥಾನಾಯಕರು ಹರಿದಾಸರಿಂದ ಪ್ರಃ ಪ್ರಥಮತಃ ವಂದನೀಯರೆಂಬುದು ಔಪಚಾರಿಕವಲ್ಲ, ಸಹಜವಾದ ವಿಚಾರವೆಂಬುದನ್ನು ಓದುಗರು ಮನಗಾಣದಿರರು.

ನಮ್ಮ ಕಥಾನಾಯಕರ ಪೂರ್ವಜರು ಕುರುಹಳ್ಳಿಯಲ್ಲಿ ಇದ್ದವರು. ಬೆಂಗಳೂರು ಜಿಲ್ಲೆಯ ಚನ್ನಪಟ್ಟಣ ತಾಲೂಕಿನ ಸಮೀಪ ಅಬ್ಬೂರು ಇವರ ಹಿರಿಯರು ವಾಸಮಾಡಿಕೊಂಡಿದ್ದ ಹಳ್ಳಿ. ಪ್ರಕೃತಿಯ ಮಡಿಲಲ್ಲಿ ಹರಿಯುತ್ತಿರುವ ಕಣ್ವ ನದಿಯು ಇಲ್ಲಿ ಪ್ರವಹಿಸುತ್ತಿದೆ. ಹಳ್ಳಿಯಾದುದರಿಂದ ಪ್ರಶಾಂತ ಸನ್ನಿವೇಶವೆಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಲೌಕಿಕ ವಿಷಯಗಳತ್ತ ಇಂದ್ರಿಯಗಳನ್ನು ಎಳೆಯುವ ಸುಖೋಪಕರಣಗಳು ಹಳ್ಳಿಗಳಲ್ಲಿ ಯಾವಾಗಲೂ ಸ್ವಾಭಾವಿಕವಾಗಿ ಕಡಿಮೆ. ಇತ್ತೀಚೆಗೆ ಹಳ್ಳಿಗರೂ ಪಟ್ಟಣಿಗರ ವಿಶೇಷ ಸಂಪರ್ಕದಿಂದ ಕೃತ್ರಿಮ ಸುಖೋಪಕರಣಗಳನ್ನು ತಾವೂ ಸಂಗ್ರಹಿಸಿ ಸುಲಭವಾಗಿ ದೊರೆಯಬಹುದಾದ ಪ್ರಕೃತಿದತ್ತವಾದ

ಸುಖಗಳನ್ನು ಅನುಭವಿಸಲು ಇಚ್ಛೆಯಿಲ್ಲದೆ ನವನಾಗರೀಕತೆಗೆ ಮನಸೋತು ಬೆಳಗುವ ಬಾಳನ್ನು ಹಾಳುಮಾಡಿಕೊಂಡು ಪಟ್ಟಣಿಗರಿಗಿಂತ ತಾವು ಸುಧಾರಕರೆಂಬ ಕೀರ್ತಿಯನ್ನು ತಮ್ಮ ಹಳ್ಳಿಗೆ ಕೊಡಿಸಿಬಿಟ್ಟರೆ ಪುರುಷಾರ್ಥವನ್ನು ಹೊಂದಿದಂತಾಗುವುದು ಎಂಬ ಭ್ರಾಂತಿಗೆ ವಶರಾದುದು ಶೋಚನೀಯವಾದ ಸಂಗತಿಯಾಗಿದೆ.

ಶ್ರೀಪಾದರಾಜರ ಹಿರಿಯರ ಕಾಲದಲ್ಲಿ ಇಷ್ಟು ಅಂಧಾನುಕರಣವು ಮುಂದರಿದಿರಲಿಲ್ಲ. ಈಗೀಗ ಒಬ್ಬರನ್ನು ನೋಡಿ ಒಬ್ಬರು ಈ ಕೃತ್ರಿಮ ಸೌಲಭ್ಯಗಳಿಗೆ ಮರುಳಾಗಿ ಇವುಗಳ ಸಂಗ್ರಹದಲ್ಲಿ ತತ್ಪರರಾಗಿರುವರು. ಶ್ರೀಪಾದರಾಜರ ಹಿರಿಯರು ಪಾರಮಾರ್ಥಿಕ ವಿಷಯಗಳನ್ನು ಸಂಗ್ರಹಿಸುವುದರಲ್ಲಿ ಲವಲವಿಕೆಯುಳ್ಳವರಾಗಿದ್ದರು. ಇವರ ತಂದೆ ಶೇಷಗಿರಿಯಪ್ಪ, ತಾಯಿ ಗಿರಿಯಮ್ಮ.

ಶೇಷಗಿರಿಯಪ್ಪನು ಘನಾಂತ ವೇದಸುಧೆಯನ್ನು ಹಾಕಿದ ಘನಪಾಠಿಯೂ ಅಲ್ಲ. ಸಿದ್ಧಾಂತಗಳನ್ನೋದಿ ಪಂಡಿತಾಗ್ರೇಸರನೆನಿಸಿ ಮೆರೆದವನೂ ಅಲ್ಲ. ನಿತ್ಯಾಹ್ನೀಕಕ್ಕೆ ಬೇಕಾದಷ್ಟು ಮಂತ್ರಸ್ತೋತ್ರಗಳನ್ನು ಕಲಿತು ಸುಗುಣಿಯಾದ ಸತಿಯೊಂದಿಗೆ ಗೃಹಸ್ಥ ಧರ್ಮವನ್ನು ಪಾಲಿಸುತ್ತಾ ಒಂದು ಚಿಕ್ಕ ತೋಟವನ್ನು ಕಾಪಾಡಿಕೊಂಡು ಶ್ರೀಮಂತನಲ್ಲದಿದ್ದರೂ ಒಬ್ಬರಿಗೆ ಜೀ ಜೀ ಎನ್ನದೆ ಬಡತನವಾದರೂ ಸಂತೋಷದಿಂದಿದ್ದನು. ಗಿರಿಯಮ್ಮನು ಗರ್ಭಿಣಿಯಾದಳು. ಗರ್ಭವತಿಯಾದ ಗಿರಿಯಮ್ಮನ ಗರ್ಭಲಕ್ಷಣವು ಭಾವಿ ಶುಭ ಸೂಚಕವಾಗಿತ್ತು. ಶುಭಮುಹೂರ್ತದಲ್ಲಿ ಗಿರಿಯಮ್ಮನು ಒಂದು ಗಂಡುಮಗುವನ್ನು ಹಡೆದಳು. ಮಗುವಿಗೆ ನಾಮಕರಣದ ದಿನ ಲಕ್ಷ್ಮೀನಾರಾಯಣನೆಂಬ ಹೆಸರಿಟ್ಟರು. ಈ ಲಕ್ಷ್ಮೀನಾರಾಯಣನೇ ನಮ್ಮ ಕಥಾನಾಯಕರು ಇವರ ತಂದೆತಾಯಿಗಳು ಭಗವಂತನ ಭಕ್ತರಾದುದರಿಂದಲೂ ಧರ್ಮತತ್ಪರರಾದುದರಿಂದಲೂ ಇಂಥಾ ಪುಣ್ಯ ಪುರುಷರನ್ನು ಪುತ್ರನನ್ನಾಗಿ ಪಡೆದರು. (ಕಿ. ಶ. ೧೪೦೬)

ಬಾಲಕನು ಆಟಪಾಟಗಳಿಂದ ಎಲ್ಲರ ಕಣ್ಮಣಿಯಾದನು. ತಂದೆ ತಾಯಿಗಳಂತೂ ಮಗನ ನಡೆನುಡಿಗಳು ಆಟ ಪಾಟಗಳನ್ನು ನೋಡಿ ಪರಮಾನಂದಭರಿತರಾದರು.

ಶೇಷಗಿರಿಯಪ್ಪನು ಮಗನಿಗೆ ಸಕಾಲದಲ್ಲಿ ಹಲಗೆ ಮುಹೂರ್ತ§ವನ್ನು ಮಾಡಿಸಿದನು. ಕುಶಾಗ್ರಮತಿಯುತನಾದ ಮಗನನ್ನು ಕಂಡು ಶೇಷಗಿರಿಯಪ್ಪನಿಗೆ ಆಶ್ಚರ್ಯವಾಯ್ತು. ಆದರೆ ಹೆಚ್ಚಿಗೆ ಶಿಕ್ಷಣವನ್ನು ಕೊಡಲು ಶೇಷಗಿರಿಯಪ್ಪನು ಸ್ವತಃ ವಿದ್ಯಾವಂತನಲ್ಲ—ಬೇರೆ ಕಡೆಕಳಿಸಲು ಅನುಕೂಲವಿಲ್ಲ. ಮಗನನ್ನಗಲಿರಲು ಮನಸ್ಸಿಲ್ಲ—ಈ ಬಾಲಕನ ಸಂಗಡಿಗರೆಂದರೆ ಹಳ್ಳಿಯ ರೈತರ ಮಕ್ಕಳು—ಮತ್ತು ದನಗಾವಗೊಲ್ಲರು. ಅವರೊಂದಿಗೆ ಆಟವಾಡುತ್ತಾ ದನಗಳನ್ನು ಮೇಯಿಸುತ್ತಿದ್ದನು. ಎಲ್ಲ ಆಟಗಳಲ್ಲೂ ಇವನೇ ಮುಂದು. ಇವನ ಚಟುವಟಿಕೆಗಳಿಂದಾಗಿ ಒಡನಾಡಿಗಳಿಗೆ ಹಿರಿಯಮಣಿಯಾಗಿದ್ದನು. ಆ ಕಾಲದಲ್ಲಿ ಈ ಹುಡುಗರ ಆಟವೆಂದರೆ ಆಗಾಗ ನೋಡಿಬರುತ್ತಿದ್ದ ಬಯಲಾಟ (ಯಕ್ಷಗಾನ—ದಶಾವತಾರ ಆಟ)ದ ಅನುಕರಣೆಯು. ಲಕ್ಷ್ಮೀನಾರಾಯಣನ ಸಹವಾಸವೆಂದರೆ ಬಾಲಕರಿಗೆಲ್ಲ ಸವಿಯೂಟ.

## ಶುಭಸೂಚನೆ

**'ದರ್ಶನಾದೇವ ಸಾಧವಃ'** ಎಂಬ ಭಾಗವತೋಕ್ತಿಯು ಇಂತಹ ಸನ್ನಿವೇಶದಿಂದ ಮಾತ್ರ ನಿದರ್ಶನಕ್ಕೆ ಬರುವುದು. ಸಾಧುಗಳ ದರ್ಶನವೇ ಪರಮಲಾಭವು.

ಒಂದು ದಿನ ಆಚಾರ್ಯರ ಸಾಕ್ಷಾಚ್ಛಿಷ್ಯರಾದ ಪದ್ಮನಾಭ ತೀರ್ಥರ ಪರಂಪರೆಯಲ್ಲಿ ಯತಿಗಳಾಗಿದ್ದ ಸತ್ಯವ್ರತತೀರ್ಥರ ಶಿಷ್ಯರಾದ ಸ್ವರ್ಣವರ್ಣ ತೀರ್ಥರು ಕಾವೇರೀ ಸ್ನಾನಾರ್ಥವಾಗಿ ಶ್ರೀರಂಗ ಪಟ್ಟಣಕ್ಕೆ ಹೋಗಿದ್ದವರು ಮಾರ್ಗಸ್ಥರಾಗಿ ಅಬ್ಬೂರಿನ ಸಮೀಪಕ್ಕೆ ಬಂದರು. ರವಿಯು ಅಸ್ತಮಿಸುವ ಸಮಯ. ಊರುಕಾಣಿಸಲಿಲ್ಲ. ದನಗಳನ್ನು ಮೇಯಿಸುತ್ತಿದ್ದ ಬಾಲಕರನ್ನು ಮೇನೆಯಲ್ಲಿದ್ದ ಸ್ವಾಮಿಗಳು ಕಂಡು, ಅವರ ಮಧ್ಯದಲ್ಲಿ ತೇಜಸ್ವಿಯಾಗಿರುವ ಲಕ್ಷ್ಮೀನಾರಾಯಣನನ್ನು ಕಂಡು ಗೋಕುಲದಲ್ಲಿ ಮಂದೆಯ ಮಧ್ಯದಲ್ಲಿ ಗೋವಳರನ್ನು ಕೂಡಿಕೊಂಡು ರಾರಾಜಿಸುತ್ತಿದ್ದ ಗೋಪಾಲಕೃಷ್ಣನನ್ನು ಸ್ಮರಿಸಿಕೊಂಡರು. ಸ್ವಾಮಿಗಳು ಬಾಲಕ

§ ಹಲಗೆ ಮುಹೂರ್ತವೆಂದರೆ ಅಕ್ಷರಾಭ್ಯಾಸಾರಂಭವು.

ರನ್ನು ಸಮೀಪಕ್ಕೆ ಕರೆದರು. ಮಿಕ್ಕವರೆಲ್ಲಾ ಹೆದರಿ ಓಡಿದರು. ಲಕ್ಷ್ಮೀನಾರಾಯಣನು ಮಾತ್ರ ಸಮೀಪಕ್ಕೆ ಬಂದನು. ಮೇನೆಯಲ್ಲಿ ಕುಳಿತಿರುವವರು ಸ್ವಾಮಿಗಳೆಂದು ತಿಳಿದು ಸಂಪ್ರದಾಯಜ್ಞರಾದ ತಂದೆ ತಾಯಿಗಳ ಪೋಷಣೆಗೊಳಪಟ್ಟವನಾದುದರಿಂದ ದೀರ್ಘದಂಡ ಪ್ರಣಾಮವನ್ನು ಮಾಡಿದನು. ಬಾಲಕನ ನಡವಳಿಕೆಯನ್ನು ಕಂಡ ಸ್ವಾಮಿಗಳು ಸಂತೋಷಪಟ್ಟವರಾಗಿ—

**ಸ್ವಾಮಿಗಳು:**—ಮಗೂ! ನಿನ್ನ ಹೆಸರೇನು?

**ಬಾಲಕ:**--ಲಕ್ಷ್ಮೀನಾರಾಯಣ.

**ಸ್ವಾ:**— ನಿಮ್ಮ ಮನೆಯೆಲ್ಲಿ?

**ಬಾ:**—ಅಬ್ಬೂರಿನಲ್ಲಿ ಅದೋ! ಆ § ತ್ವಾಟದಲ್ಲಿ.

**ಸ್ವಾ:**—ನಿಮ್ಮ ತಂದೆ ತಾಯಿಗಳ ಹೆಸರೇನಪ್ಪ

**ಬಾ:**—ತಂದೆ ಶೇಷಗಿರಿಯಪ್ಪ. ತಾಯಿ ಗಿರಿಯಮ್ಮ.

**ಸ್ವಾ:**—ಅಬ್ಬೂರು ಎಷ್ಟು ದೂರವಿದೆಯಪ್ಪಾ!

**ಬಾ:**—ಹೊತ್ತು ಮುಳುಗುವುದರೊಳಗಾಗಿ ದನಗಳನ್ನು ಎಬ್ಬಿಕೊಂಡು ನಾವೆಲ್ಲರೂ ಮನೆಸೇರಬೇಕು. ಸೂರ್ಯನು ಮುಳುಗಲು ಇನ್ನು ಎಷ್ಟು ಹೊತ್ತು ಬೇಕು ಎಂಬುದನ್ನು ಯೋಚಿಸಿದರೆ ತಮಗೇ ತಿಳಿಯಬಹುದು.

– ಬಾಲಕನ ಬಹು ಜಾಣ್ಮೆಯ ಮಾತುಗಳು ಸ್ವಾಮಿಗಳಿಗೆ ರುಚಿಕಟ್ಟಾಯ್ತು. ಈ ಬಾಲಕನು ಸಾಮಾನ್ಯನಲ್ಲವೆಂದುಕೊಂಡರು.

**ಸ್ವಾ:**—ಅದಿರಲಿ! ಇಲ್ಲಿ ಕಾಣುವ ಗುಡ್ಡ ಯಾವುದೋ?

**ಬಾ:**—ಸ್ವಾಮಿಗಳ ಗುಡ್ಡ. †

---

§ ತೋಟ

† ಬ್ರಹ್ಮಣ್ಯತೀರ್ಥರ ಗುರುಗಳಾದ ಪುರುಷೋತ್ತಮ ತೀರ್ಥರು ವಾಸ ಮಾಡಿಕೊಂಡಿದ್ದ ಗುಹೆಯು ಈ ಗುಡ್ಡದ ಮಧ್ಯದಲ್ಲಿದೆ.

ಸ್ವಾ: ಯಾವ ಸ್ವಾಮಿಗಳೋ?

ಬಾ: ಗುಡ್ಡದ ಸ್ವಾಮಿಗಳು.

ಸ್ವಾ: ನೀನವರನ್ನು ನೋಡಿದ್ದೀಯಾ?

ಬಾ:—ಹೋ! ನೋಡದೇ ಏನು! ಎಷ್ಟೋಸಾರಿ ನೋಡಿದ್ದೇನೆ. ನಮ್ಮೂರಿಗೆ ಯಾವಾಗಲೂ ಬರ್ತ್ತಾರೆ. ನದೀಲಿ ಸ್ನಾನಮಾಡ್ತ್ತಾರೆ. ನಮ್ಮ ದೊಡ್ಡಮ್ಮನ× ಮನೆಯಲ್ಲಿ ಪೂಜೆಮಾಡ್ತ್ತಾರೆ. ಎಲ್ಲಾರಿಗೂ ತೀರ್ಥ ಕೊಡ್ತ್ತಾರೆ. ಮಕ್ಕಳಿಗೆಲ್ಲಾ ದೇವರ ನೈವೇದ್ಯಕ್ಕಿಟ್ಟ ಹಣ್ಣು ಕಲ್ಸಕ್ರೆ ದ್ರಾಕ್ಷಿ ಎಲ್ಲಾ ಕೊಡ್ತ್ತಾರೆ. ನನಗೆ ಒಂದ್ಸಾರಿ ಕೆಂಡಾಮಂಡ್ಲಿ ಜ್ವರ ಬಂದಿತ್ತು. ನಮ್ಮಪ್ಪ ಗುಡ್ಡದ್ಸ್ವಾಮಿಗಳ ಕೈಲಿ ತೀರ್ಥ ಹಾಕ್ಸಿಬಿಟ್ಟ— ಜ್ವರ ಓಡೋಯ್ತು. ನಮ್ಮೂರಾಗೆ ಯಾರಿಗ್ಹರ್ವ ಬಂದ್ರೂ ‡ ಔಸ್ಥಿ ಕೊಡ್ಸೋದೆ ಇಲ್ಲ.

ಈ ಬಾಲಕನಾಡುತ್ತಿರುವ ಸರಸ ನುಡಿಗಳು ಸ್ವಾಮಿಗಳಿಗೆ ಕರ್ಣ ಪೀಯೂಷವಾಯ್ತು.

ಸ್ವಾ: - ಸ್ವಾಮಿಗಳಿರುವಲ್ಲಿ ಹೋಗೋಣ, ಬರ್ತೀಯೇನೋ!

ಬಾ:—ಊಂ ಹೂಂ.

ಸ್ವಾ:—ಯಾಕೋ?

ಬಾ:—ನಾನ್ಯಾಕ್ಬರ್ಲಿ ಆ ಗುಡ್ಡಕ್ಕೆ! ಅಲ್ಲಿ ಹುಲಿ ಕರಡಿ ಎಲ್ಲಾ ಬರ್ತಿರ್ತ್ತಾವಂತೆ.

ಸ್ವಾ:—ಹಾಗಾದರೆ ಅವರು ಹ್ಯಾಗಲ್ಲಿದ್ದಾರೋ?

ಬಾ: - ಅವರು ಸ್ವಾಮಿಗಳು ಅದಕ್ಕೇ ಇದ್ದಾರೆ.

ಸ್ವಾ:—ಸ್ವಾಮಿಗಳಾದರೇನೋ! ಹುಲಿ ಕರಡಿಗಳು ಸಂಚರಿಸುವ ಗುಡ್ಡದಲ್ಲಿ ಇರೋದು ಹೇಗೋ?

---

× ಲಕ್ಷ್ಮೀನಾರಾಯಣನ ತಾಯಿಯ ಅಕ್ಕ.

‡ ಔಷಧಿ.

ಬಾ:—ಅವರಿಗೆ ದೇವರು ಪ್ರತ್ಯಕ್ಷವಂತೆ. ಹುಲಿಕರಡಿಗಳೇನೂ ಮಾಡೋದಿಲ್ಲವಂತೆ.

ಸ್ವಾ:—ನಿನಗೆ ಹೀಗೆ ಯಾರು ಹೇಳಿದರೋ?

ಬಾ:—ನಮ್ಮೂರಲ್ಲೆಲ್ಲರೂ ಹೇಳ್ತಾರೆ. ನಮ್ಮನೇಲಂತೂ ಅವರದ್ದೇ ಮಾತು. ನಮ್ಮಪ್ಪ ಚಿಕ್ಕಮ್ಮ ದೊಡ್ಡಮ್ಮ ಅಮ್ಮ ಎಲ್ಲರೂ ಯಾವಾಗಲೂ ಹೇಳ್ತಿರ್ತಾರೆ.

ಸ್ವಾ:—ಹೋಗ್ಲಿ ಬಿಡು! ನಮ್ಮ ಮೇನೆಯಲ್ಲಿ ಕುಳಿತುಕೊ. ನಿನ್ನನ್ನು ಊರಿನಲ್ಲಿ ಬಿಟ್ಟು ನಾವು ಗುಡ್ಡಕ್ಕೆ ಹೋಗುತ್ತೇವೆ.

ಬಾ:—ಊಂ ಹೂಂ

ಸ್ವಾ:—ಯಾಕೋ?

ಬಾ:—ಮೇನೆಯಲ್ಲಿ ಕೂತುಗೊಳ್ಳೋಕೆ ನಾನೇನು ಸ್ವಾಮಿಯೇನು?

ಸ್ವಾ:—ಹಾಗಾದರೆ ನಿನ್ನನ್ನು ಸ್ವಾಮಿಗಳನ್ನೇ ಮಾಡಿಬಿಡೋಣ.

ಬಾ:—ಈಗ ಸರಿಹೋಯ್ತು ನಮ್ದೊಡ್ಡಮ್ಮನ್ಮಗನ್ನ ಗುಡ್ಡದ್ಸ್ವಾಮಿಗಳು ಸ್ವಾಮಿಮಾಡಿದಾರೆ, ನನ್ನನ್ನ ನೀವು ಸ್ವಾಮಿ ಮಾಡ್ಬಿಟ್ರೆ ಸರಿ.

ಸ್ವಾ:—ಆಗಬಾರದೇನೋ?

ಬಾ:—ನಾನು ಸ್ವಾಮಿಯಾದರೆ ನಮ್ಮಪ್ಪನ ಜೊತೇಲಿ ಕೆಲ್ಸಕ್ಕೆ ನೆರವಾಗೋರ್ಯಾರು? ತ್ವಾಟ ನೋಡೋರ್ಯಾರು? ದನಗಳ ಗತಿಯೇನು?

ಸ್ವಾ:—ಅಲ್ಲವೋ ಗುಡ್ಡದ ಸ್ವಾಮಿಗಳಿಗೆ ದೇವರು ಪ್ರತ್ಯಕ್ಷ ಅಂತ ನೀನೇ ಹೇಳ್ತಿ. ನೀನೂ ಹಾಗೇ ದೇವರನ್ನು ನೋಡೋದೊಳ್ಳೇದೋ ತೋಟ ನೋಡಿಕೊಂಡಿರೋದು ಒಳ್ಳೆದೋ!

ಬಾ:—ಸ್ವಾಮಿಗಳಾದವರಿಗೆಲ್ಲಾ ದೇವರು ಸಿಕ್ತಾನೇನು?

ಸ್ವಾ:—ನಾವು ನಿನಗೆ ದಾರಿತೋರಿಸ್ತೇವಯ್ಯಾ!

**ಬಾ:**—ಅದೇನೋ ಅದೆಲ್ಲಾ ನನಗೆ ತಿಳಿಯದು—ನಮ್ಮ ಗುಡ್ಡದ್ಸ್ವಾಮಿಗಳು ಎಲ್ಲಾ ದೇವರೇ ಮಾಡ್ಸೋದು ಅನ್ತಾರೆ—ಆದ್ರಿಂದ ದೇವರು ಮಾಡಿಸಿದ್ದಾಗಲಿ. ಈಗ ನಾನು ದನಗಳನ್ನಟ್ಟಿಕೊಂಡು ಮನೆಗ್ಹೋಗ್ಬೇಕು. ಹೊತ್ತಾದರೆ ನಮ್ಮಪ್ಪ-ಅಮ್ಮ ಬಯ್ತಾರೆ.

–ಸ್ವಾಮಿಗಳು ಈ ಬಾಲಕನು ಸಾಮಾನ್ಯನಲ್ಲವೆಂದೂಹಿಸಿ ಸಮೀಪಕ್ಕೆ ಕರೆದು ನಾರಾಯಣ ಸ್ಮರಣ ಪೂರ್ವಕ ತಲೆಯ ಮೇಲೆ ಮಂತ್ರಾಕ್ಷತೆಯನ್ನು ಹಾಕಿ ತಮ್ಮ ದಿವ್ಯ ಹಸ್ತವನ್ನಿಟ್ಟರು. ಸ್ವಾಮಿಗಳ ಮೇನೆಯು ಮುಂದೆಸಾಗಿತು. ತಮ್ಮ ದೃಷ್ಟಿಗೆ ಬೀಳುವಲ್ಲಿಯ ತನಕ ಲಕ್ಷ್ಮೀನಾರಾಯಣನನ್ನೇ ನೋಡುತ್ತಿದ್ದರು. ಇತ್ತ ಲಕ್ಷ್ಮೀನಾರಾಯಣನು ತನ್ನ ದನಗಳ ಹೆಸರ್ಹಿಡಿದು ಕೂಗಿ 'ಅಂಬೇ' 'ಅಂಬೇ' ಎಂದು ಕೂಗುತ್ತಬಂದ ದನಕರುಗಳನ್ನು ಕೂಡಿಕೊಂಡು ಜತೆಗಾರರೊಂದಿಗೆ ತನ್ನ ಮನೆಯ ಕಡೆ ಹೊರಟನು.

**ಸಂಗಡಿಗರು:** –ಏನಯ್ಯಾ? ಲಕ್ಷ್ಮೀನಾರಾಯಣ! ಸ್ವಾಮಿಗಳು ನಿನ್ನೊಂದಿಗೆ ಬಹಳ ಹೊತ್ತು ಮಾತಾಡುತ್ತಿದ್ದರಲ್ಲ?

**ಲಕ್ಷ್ಮೀನಾರಾಯಣ:**—ಹೌಧ್ದ್ಹು ಏನೇನೋ ಕೇಳಿದರು. ನನ್ನನ್ನು ಸ್ವಾಮಿ ಮಾಡ್ತಾರಂತೆ!

**ಸಂ:**—ಓಹೋ! ಹಾಗಾದರೆ ನಮಗೆಲ್ಲಾ ನೀನು ಸ್ವಾಮಿಯಾಗ್ತಿ.

**ಲ:**—ಅದೇನೋಪ್ಪ! ಅವರಂತೂ ಹಾಗೆ ಹೇಳಿದರು.

**ಸ:**—ನಮ್ಮನ್ನ ಮಾತ್ರ ಮರಿಯಬೇಡಪ್ಪ!

**ಲ:**—ಇಲ್ಲ—ಇಲ್ಲ ನಾನು ಸ್ವಾಮಿಯಾದರೇನು, ನನಗೆ ಕೋಡು ಬರುತ್ತೆಯೇ? ನಾನು ದೊಡ್ಡವನು ಎಂದು ಯಾವಾಗಲೂ ತಿಳಿಯುವುದೇ ಇಲ್ಲ.

ಹೀಗೆ ವಿನೋದವಾಗಿ ಸಂಭಾಷಿಸುತ್ತಾ ಬಾಲಕರೊಂದಿಗೆ ಲಕ್ಷ್ಮೀನಾರಾಯಣನು ಮನೆಯನ್ನು ಸೇರಿದನು.

ಇತ್ತ ಸ್ವರ್ಣ ವರ್ಣ ತೀರ್ಥರು ಪುರುಷೋತ್ತಮ ತೀರ್ಥರ ಬಳಿಗೆ ಬಂದರು. ಇಬ್ಬರೂ ಪ್ರೇಮಾಲಿಂಗನ ಮಾಡಿಕೊಂಡರು. ಇವರಿಬ್ಬರ ಸಮಾಗಮವು ಪುಣ್ಯನದಿಗಳೆರಡರ ಸಂಗಮದಂತಿತ್ತು

ಇಬ್ಬರಿಗೂ ಕುಶಲಪ್ರಶ್ನೆಗಳಾಯ್ತು. ಪುರುಷೋತ್ತಮ ತೀರ್ಥರ ಸಮೀಪದಲ್ಲಿದ್ದ ತೇಜಸ್ವಿಗಳಾದ ಬಾಲ ಯತಿಗಳನ್ನು ಕಣ್ತುಂಬನೋಡಿ ಸ್ವರ್ಣವರ್ಣತೀರ್ಥರಿಗೆ ಅತ್ಯಾನಂದವಾಗಿ ತಮಗೂ ಇಂತಹ ತೇಜಸ್ವಿಯಾದ ಶಿಷ್ಯರೊಬ್ಬರು ಲಭಿಸಿದರಾಗುತ್ತಿತ್ತೆಂದರು. ಆಗ ಪುರುಷೋತ್ತಮ ತೀರ್ಥರು "ಮಾರ್ಗದಲ್ಲಿಯೇ ಶ್ರೀಹರಿಯು ದೊರಕಿಸಿರುವನಲ್ಲ" ಎಂದರು. ಈ ಅರ್ಥಗರ್ಭಿತವಾದ ಮಾತಿನಿಂದ ಸ್ವರ್ಣವರ್ಣತೀರ್ಥರಿಗೆ ತಮ್ಮ ಅಭಿಲಾಷೆಯು ಬೇಗನೇ ಕೈಗೊಡುವುದೆಂದು ಸಂತೋಷವಾಯ್ತು.

## ಸುಕೃತವಿಶೇಷವು

ಇತ್ತ ಮಗನು ಕತ್ತಲಾದರೂ ಬಾರದಿದ್ದುದರಿಂದ ಹಾದಿನೋಡುತ್ತಿದ್ದವರು ಮಗನು ಬಂದು ಹಟ್ಟಿಯಲ್ಲಿ ದನಗಳನ್ನು ಕಟ್ಟಿಬಂದಮೇಲೆ—

**ಗಿರಿಯಮ್ಮ:**—ಇಷ್ಟು ತಡವೇಕಾಯಿತಪ್ಪಾ?

**ಲಕ್ಷ್ಮೀನಾರಾಯಣ:**—ಯಾರೋ ಸ್ವಾಮಿಗಳು ಮಾತಾಡಿಸುತ್ತ ನಿಲ್ಲಿಸಿದರಮ್ಮಾ!

**ಗಿ:**—ಯಾರು? ಗುಡ್ಡದ ಸ್ವಾಮಿಗಳೇನೋ?

**ಲ:**—ಅಲ್ಲಮ್ಮ! ಅವರ ಗುರುತು ನನಗಿಲ್ಲವೇ? ಇವರು ಅವರಿಗಿಂತ ಜೋರಾಗಿದ್ದಾರಮ್ಮ!

**ಗಿ:**—ಹಾಗನ್ಬಾರ್ದಪ್ಪ

**ಲ:**—ಅಲ್ವಮ್ಮ ಅದೇನು ಬೈದ್ಹಾಗೇನಮ್ಮ? ಭಾರೀ ಮಾತಾಡ್ತಾರೆ ಅಂತ ಅಷ್ಟೆ! ನನ್ನ ಕರದು ಬಹಳ ಮಾತಾಡಿದ್ರಮ್ಮ- ಆ ಮೇಲೆ ನನ್ನ ಮೇನೇಲ್ಕೂತ್ಕೊ ಅಂದ್ರು. ಮೇನೇಲಿ ಕೂತುಗೊಳ್ಳೋಕೆ ನಾನೇನು ಸ್ವಾಮಿಯೇ ಅಂದೆ—ನನ್ನೂ ಸ್ವಾಮಿಮಾಡ್ತೇವೆ ಅಂದ್ರು.

**ಗಿ:**—ಏನು! ಏನು! ನಿನ್ನನ್ನು ಸ್ವಾಮಿ ಮಾಡ್ತಾರಂತೆಯೇ?

**ಲ:** ಅವರು ಹಾಗಂದರಮ್ಮಾ ನೀನ್ಯಾಕೆ ಅಷ್ಟು ಘಾಬರಿಯಾಗ್ತಿ?

ಗಿರಿಯಮ್ಮನಿಗೆ ಮಗನು ಎಲ್ಲಿ ಸ್ವಾಮಿಯಾಗುವನೋ ಎಂಬ ಸಂದೇಹವೇ ಬಲವಾಗಿ, ಮಗನನ್ನು ಮನೆಬಿಟ್ಟು ಹೊರಡಲು ಬಿಡಲಿಲ್ಲ. ಇಷ್ಟರೊಳಗಾಗಿ ಶೇಷಗಿರಿಯಪ್ಪನೂ ಮನೆಗೆ ಬಂದನು. ಹೆಂಡತಿಯಿಂದ ಎಲ್ಲಾ ವಿಚಾರವೂ ತಿಳಿಯಿತು. ಸ್ವಾಮಿಗಳು ಮಗನಿಗೆ ಮಂತ್ರಾಕ್ಷತೆ ಹಾಕಿದುದನ್ನು ಕೇಳಿಯೇನೋ ಸಂತೋಷವಾದರೂ ಮಗನನ್ನು ಸ್ವಾಮಿಗಳು 'ಸ್ವಾಮಿಯಾಗು' ಎಂದು ಹೇಳಿರುವುದನ್ನು ಕೇಳಿ ಮಾತ್ರ ಬಹಳ ಅತೃಪ್ತಿಯಾಯ್ತು.

ಮಾರನೇ ದಿನ ಪುರುಷೋತ್ತಮ ತೀರ್ಥರು ಮಗನೊಂದಿಗೆ ದಂಪತಿಗಳು ಬರಬೇಕೆಂದು ಹೇಳಿಕಳಿಸಿದರು. ಗಿರಿಯಮ್ಮನು ಬಹಳ ಕಳವಳದಿಂದ ಯಾಕೆ ಹೇಳಿಕಳಿಸಿದರೋ ಏನೋ ಎಂದಳು. ಶೇಷಗಿರಿಯಪ್ಪನು ಏನಾದರೂ ದೊಡ್ಡವರ ಆಜ್ಞೆ ಹೋಗದಿರಬಾರದೆಂದು ಹೆಂಡತಿಯನ್ನೂ ಮಗನನ್ನೂ ಕರೆದುಕೊಂಡು ಹೊರಟನು. ಹೊರಡುವಾಗ ಗಿರಿಯಮ್ಮನು 'ಮಗನನ್ನು ಸನ್ಯಾಸಿಯನ್ನಾಗಿ ಮಾತ್ರ ಮಾಡದಂತೆ ಮೊದಲು ಪ್ರಾರ್ಥಿಸಿಕೊಳ್ಳಿ' ಎಂದು ಪತಿಯಲ್ಲಿ ವಿಜ್ಞಾಪಿಸಿಕೊಂಡಳು. ಶೇಷಗಿರಿಯಪ್ಪನು ಪುರುಷೋತ್ತಮ ತೀರ್ಥರೂ ಸ್ವರ್ಣ ವರ್ಣ ತೀರ್ಥರೂ ಬಾಲಯತಿಗಳೂ ಪೀಠಾಲಂಕೃತರಾಗಿರುವಾಗ ಮೂವರಿಗೂ ಪತ್ನೀ ಪುತ್ರರೊಂದಿಗೆ ಅಭಿವಂದಿಸಿ ಕೈ ಜೋಡಿಸಿಕೊಂಡು ನಿಂತನು. ಸ್ವಾಮಿಗಳು ಕೂಡಲು ಆಜ್ಞೆಯನ್ನೀಯಲು ಕುಳಿತುಕೊಂಡನು. ಶೇಷಗಿರಿಯಪ್ಪನು ಸ್ವರ್ಣ ವರ್ಣ ತೀರ್ಥರನ್ನು ಅರಿಯದವನಲ್ಲ. ಶ್ರೀಮಠದ ಶಿಷ್ಯನೇ ಆಗಿದ್ದನು. ತಮ್ಮ ಮಠದ ಸ್ವಾಮಿಗಳು ಬಂದಿರುವುದನ್ನು ನೋಡಿ ಹರ್ಷಿತನಾದನು.

§ಸುವರ್ಣ ವರ್ಣತೀರ್ಥರು ಪುರುಷೋತ್ತಮ ತೀರ್ಥರಿಗೆ ಲಕ್ಷ್ಮೀನಾರಾಯಣನನ್ನು ತೋರಿಸಿ ಇವನೇ ನಮಗೆ ಸಿಕ್ಕವನು **ಮಾರ್ಗದರ್ಶಕನು** ‡

---

§ ಸ್ವರ್ಣ ವರ್ಣ ತೀರ್ಥರನ್ನೇ ಸುವರ್ಣ ವರ್ಣ ತೀರ್ಥರೆಂದೂ ಕರೆಯುವ ರೂಢಿಯಿದೆ.

‡ ಅಚ್ಯುತ ಪ್ರೇಕ್ಷರಿಗೆ ಶ್ರೀಮನ್ಮಧ್ವಾಚಾರ್ಯರು ಶಿಷ್ಯರಾದರೂ ಅವರೇ ಗುರುಗಳಿಗೆ ಮಾರ್ಗದರ್ಶಕರಾದರು ಹಾಗೆ ಎಂದು ಭಾವವು

ಎಂದು ಅರ್ಥಗರ್ಭಿತವಾಗಿ ಹೇಳಿ ಲಕ್ಷ್ಮೀ ನಾರಾಯಣನನ್ನು ಕರೆದು ತಮ್ಮ ಸಮೀಪದಲ್ಲಿ ಕೂಡಿಸಿಕೊಂಡರು.

ಗಿರಿಯಮ್ಮನಿಗೆ ಮಾತ್ರ ತಮ್ಮ ಮಗನನ್ನು ಸ್ವಾಮಿಗಳು ಕರೆದು ಸಮೀಪದಲ್ಲಿ ಕೂಡಿಸಿಕೊಂಡುದರಿಂದ ಸಂತೋಷವಾಗಲಿಲ್ಲ. ಕಾರಣ ಇದೇ ರೀತಿ ಹಿಂದೆ ಪುರುಷೋತ್ತಮತೀರ್ಥರು ತಮ್ಮಕ್ಕನಮಗನನ್ನು ಕರೆದು ಬಳಿಯಲ್ಲಿ ಕೂಡಿಸಿಕೊಂಡು ತಲೆಬೋಳಿಸಿ ಸದಾ ತನ್ನ ಬಳಿಯಲ್ಲೇ ಕೂಡಿಸಿಕೊಂಡುಬಿಟ್ಟರು. ಇನ್ನು ತನ್ನ ಮಗನಿಗೆ ಇವರು ತಲೆ ಬೋಳಿಸಿ ಬಿಟ್ಟರೆ ಸರಿಹೋಯ್ತು, ಎಂದು ಎದೆಯೊಡೆದು ಗಂಡನ ಕಿವಿಯಲ್ಲಿ—

**ಗಿರಿಯಮ್ಮ:**—ಸ್ವಾಮಿಗಳು ಮಗನಿಗೆ ಸನ್ಯಾಸ ಕೊಡುವ ಪ್ರಸ್ತಾಪ ಮಾಡಿದರೆ ಏನು ಹೇಳುವಿರಿ!

**ಶೇಷಗಿರಿಯಪ್ಪ:**—ಏನು ಮಾಡಬೇಕೋ ಏನು ಹೇಳಬೇಕೋ ನೀನೇ ಹೇಳು.

ಗಿ:—ಖಂಡಿತವಾಗಿಯೂ ಒಪ್ಪಬೇಡಿ-ಸ್ವಾಮಿಗಳ ಕಾಲಮೇಲೆ ಬಿದ್ದು ಅಂಗಲಾಚಿ ಬೇಡಿಕೊಳ್ಳಿ.

ಶೇ:—ದೈವಸಂಕಲ್ಪವಿದ್ದಂತಾಗಲಿ. ನಾನಂತೂ ಪ್ರಾರ್ಥನೆ ಮಾಡುತ್ತೇನೆ.

ಇಷ್ಟರಲ್ಲಿ ಸ್ವರ್ಣವರ್ಣತೀರ್ಥರು ಶೇಷಗಿರಿಯಪ್ಪನನ್ನು ಕುರಿತು—'ಶೇಷಗಿರಿಯಪ್ಪ ನೀವು ಜನ್ಮಾಂತರದಲ್ಲಿ ಮಾಡಿದ ಸುಕೃತ ವಿಶೇಷದಿಂದ ಈ ಸುಪುತ್ರನನ್ನು ಪಡೆದಿರುವಿರಿ. ಈತನ ಕೀರ್ತಿ ಧ್ರುವ ಮಹಾರಾಜನಂತೆ ಬೆಳಗುವುದು.' ಎಂದರು.

**ಶೇಷಗಿರಿಯಪ್ಪ:**—ಪರಮಾನುಗ್ರಹ!

**ಸ್ವರ್ಣವರ್ಣತೀರ್ಥರು:**—ಆದರೆ ಮಗನನ್ನು ವಿದ್ಯಾವಂತನನ್ನಾಗಿ ಮಾಡುವಿಯೋ? ಕೊನೆಯ ತನಕ ದನ ಕಾಯುವವನೇ ಆಗಿರಲೆನ್ನುವಿಯೋ?

**ಶೇ:**—ವಿದ್ಯಾವಂತನಾಗಬೇಕು ಎಂಬ ಆಶೆಯಿದೆ. ಆದರೆ ತಕ್ಕ ಸಂದರ್ಭ ಸನ್ನಿವೇಶಗಳು ಒದಗಲಿಲ್ಲ. ದಾರಿದ್ರ್ಯದಿಂದ ಇನ್ನೂ ಮೂರೆಳೆ

ಜನಿವಾರವನ್ನು ಹುಡುಗನಿಗೆ ಹಾಕೋಣವೆಂದರೆ ಅನುಕೂಲವಾಗಲಿಲ್ಲ. ಇನ್ನು ವಿದ್ಯಾಭ್ಯಾಸದ ಯೋಚನೆ ಎಲ್ಲಿ?

**ಸ್ವಾ:**—ನೀನು ಯಾವುದಕ್ಕೂ ಯೋಚಿಸಬೇಡ. ಶ್ರೀ ಗೋಪೀನಾಥನ ಕೃಪಾ ನಿನ್ನ ಮಗನಲ್ಲಿ ಪೂರ್ಣವಾಗಿದೆ. ಅದಕ್ಕಾಗಿಯೇ ನಮ್ಮಲ್ಲಿ ಅಂತಃ ಪ್ರೇರಕನಾಗಿ ನಮ್ಮನ್ನಿಲ್ಲಿಗೆ ಸ್ವಾಮಿ ಕರೆತಂದಿರುತ್ತಾರೆ. ಹುಡುಗನು ಜಗತ್ಪೂಜ್ಯನಾಗುತ್ತಾನೆ. ಇವನಿಂದ ಲೋಕಕಲ್ಯಾಣವಾಗಬೇಕಾಗಿದೆ.

**ಶೇ:**—ಮಹದನುಗ್ರಹವಾದರೆ ಯಾವುದು ತಾನೆ ಆಗಲಾರದು!

**ಸ್ವಾ:**—ಸಂದೇಹವಿಲ್ಲ-ಆದರೆ ಹುಡುಗನನ್ನು ಮಾತ್ರ ಗೋಪೀನಾಥನ ಪೂಜೆಗೆ ನಿಯಮಿಸಿಬಿಡು.

ಶೇಷಗಿರಿಯಪ್ಪನು ಮಗನು ಸನ್ಯಾಸಿಯಾಗುವುದರಲ್ಲಿ ತನಗೆ ಸಮಾಧಾನವಿಲ್ಲವೆಂಬುದನ್ನು ಮೃದುವಾಗಿ ಸೂಚಿಸಲು "ಗೋಪೀನಾಥನನ್ನು ಪೂಜಿಸುವ ಅಧಿಕಾರಿಗಳು ಸನ್ಯಾಸಿಗಳಷ್ಟೆ?" ಎಂದನು. §

**ಸ್ವಾ:**-ಹೌದಯ್ಯಾ! ನಿನ್ನ ಮಾತು ನಿಜ

ಎಂದರು. ಶೇಷಗಿರಿಯಪ್ಪನು ದೊಡ್ಡವರಲ್ಲಿ ಭಯ ಭಕ್ತಿಯುಳ್ಳವನಾದುದರಿಂದ ಬೇರೇನನ್ನು ಆಡದೇ ಮೌನವನ್ನು ತಾಳಿದನು

**ಸ್ವಾ:**—ಮಗನ ಮೇಲೆ ತಂದೆತಾಯಿಗಳಿಗೆ ಅಭಿಮಾನವಿರುವುದು ಲೋಕ ಸಹಜವಪ್ಪ. ಆದರೆ ಮಹಾಲಾಭವನ್ನು ಕಳೆದುಕೊಳ್ಳುವುದು ಸರಿಯಲ್ಲವಪ್ಪ. ಇಂಥಾ ಸಂದರ್ಭವನ್ನು ಕಳೆದುಕೊಳ್ಳಬೇಡಿ. ನೀವೂ ಮಗನ ವೈಭವವನ್ನು ನೋಡಿಕೊಂಡು ಮಠದಲ್ಲೇ ಇದ್ದು ಬಿಡಿ. ಸಂಸ್ಥಾನವೇ ನಿಮ್ಮದು.

---

§ ಅಂದರೆ ಆ ಮಠದ ದೇವರು ಗೋಪೀನಾಥನಾದುದರಿಂದ ಸನ್ಯಾಸಿಯಾಗದೆ ಪೂಜಿಸುವಂತಿಲ್ಲವೆಂಬ ಅಭಿಪ್ರಾಯವೇ ಹೊರತು ಗೋಪೀನಾಥನನ್ನು (ಶ್ರೀ ಕೃಷ್ಣನನ್ನು) ಪೂಜಿಸಬೇಕಾದರೆ ಸನ್ಯಾಸಿಗಳೇ ಆಗಬೇಕೆಂಬ ನಿಯಮವೇನಿಲ್ಲ.

ಶೇ:—ಗುರುಚಿತ್ತ!

ಸ್ವ:—ಹರಿಚಿತ್ತ ಎನ್ನಪ್ಪ!

ಶೇ:—ಮಹದಾಜ್ಞಾ!

ಸ್ವ:—ತಂದೆಗಿಂತಲೂ ಮಕ್ಕಳಲ್ಲಿ ತಾಯಿಗೆ ಅಭಿಮಾನಹೆಚ್ಚು. ನಿನ್ನ ಮಗನು ಮಹಾಭಾಗ್ಯ ಶಾಲಿಯಾಗುವನೆಂಬುದನ್ನು ಸಾಂತ್ವನ ವಾಕ್ಯಗಳಿಂದ ನಿನ್ನ ಪತ್ನಿಗೆ ತಿಳಿಸಿ ಒಪ್ಪಿಸು.

ಶೇ:—ಪಾದಾಜ್ಞೆ!

ಇಷ್ಟಾದಮೇಲೆ ಗಿರಿಯಮ್ಮನೂ ಮರುನುಡಿಯದಾದಳು. ಲಕ್ಷ್ಮೀನಾರಾಯಣನಿಗೆ ಮಠದಲ್ಲೇ ಉಪನಯನವಾಯ್ತು.

ಕೆಲಕಾಲಾನಂತರ ಶೇಷಗಿರಿಯಪ್ಪನು ತಮ್ಮ ತೋಟವನ್ನು ಗುತ್ತಿಗೆಗೆಕೊಟ್ಟು ಮಠಕ್ಕೆ ಬಂದನು. ಸ್ವರ್ಣವರ್ಣರು ಸಂಚಾರಮಾಡುತ್ತಾ ಶ್ರೀರಂಗಕ್ಕೆ ‡ ಬಂದರು. ಕಾವೇರೀನದಿಯಿಂದ ಸುತ್ತಲ್ಪಟ್ಟು ವಿರಜಾನದಿಯಿಂದ ಸುತ್ತಲ್ಪಟ್ಟಿರುವ ವೈಕುಂಠದಂತೆಯೂ, ವೈಕುಂಠನಾಮಕನಾದ ಶ್ರೀಮನ್ನಾರಾಯಣನೇ ರಂಗನಾಥನೆನಿಸಿ ಭಕ್ತಾಭೀಷ್ಟಪ್ರದನಾಗಿ ಪವಡಿಸಿಯೂ ಸೃಷ್ಟಿ ಸೌಂದರ್ಯದಿಂದ ಕಣ್ಮನಗಳಿಗೆ ಆನಂದದಾಯಕವಾಗಿಯೂ ಇರುವ ಮನ:ಶಾನ್ತಿಪ್ರದವಾದ ಈ ಪವಿತ್ರ ಕ್ಷೇತ್ರದಲ್ಲಿ ಇರಲಿಚ್ಛಿಸಿ ಇಲ್ಲೇ ಬಹುಕಾಲ ವಾಸಿಸಿದರು.

ಶ್ರೀ ರಂಗನಾಥ ಮೂರ್ತಿಯು † ರಾರಾಜಿಸುತ್ತಿರುವ ಈ ಪುಣ್ಯಕ್ಷೇತ್ರವು ಯಾರ ಮನಸ್ಸಿಗೆ ತಾನೇ ಆನಂದವನ್ನೀಯದು? ಶ್ರೀ ರಂಗನಾಥ ದೇವರನ್ನು ನಮ್ಮ ಕಥಾನಾಯಕರೇ—

‡ ರಾಮೇಶ್ವರದ ಸಮೀಪ ಶ್ರೀರಂಗ (ಮೈಸೂರಿನ ಸಮೀಪವಿರುವುದು ಶ್ರೀರಂಗ ಪಟ್ಟಣ.) ಸ್ವರ್ಣವರ್ಣತೀರ್ಥರ ಮೂಲ ಬೃಂದಾವನ ಇಲ್ಲೇ ಇದೆ. ಇಂದಿಗೂ ಇಲ್ಲಿ ಪೂಜಾದಿಗಳು ನಡೆಯುತ್ತಾ ಶ್ರೀಪಾದರಾಜರ ಮಠವೆಂದು ಕರೆಸಿಕೊಳ್ಳುತ್ತಿದೆ.

† ಶ್ರೀ ರಂಗನಾಥ ದೇವರು ವಿಮಾನ ಶ್ರೀ ರಂಗನಾಥ ದೇವರೆಂದು ಖ್ಯಾತರು. ಈ ಮೂರ್ತಿಯನ್ನು ಬ್ರಹ್ಮದೇವರು ಆ ಮೇಲೆ ಸೂರ್ಯದೇವರು—

ರಾಗ—ತೋಡಿ ತಾಳ—ರೂಪಕ

ಕಂಗಳಿವ್ಯಾತಕೋ ಕಾವೇರೀ ರಂಗನ ನೋಡದವ ॥ ಪ ॥
ಜ--ಗಂಗಳೊಳಗೆ ಮಂಗಳ ಮೂರುತಿ
ರಂಗನ ಶ್ರೀಪಾದಂಗಳ ನೋಡದ ॥ ॥ ಅ ॥ ಪ ॥
ಹರಿಪಾದೋದಕ ಸಮಕಾವೇರಿ
ವಿರಜಾನದಿಯ ಸ್ನಾನವಮಾಡಿ ॥
ಪರಮ ವೈಕುಂಠ ರಂಗ ಮಂದಿರ
ಪರ ವಾಸುದೇವನ ನೋಡದ ॥ ೧ ॥

ಎಂದಿಗಾದರೊಮ್ಮೆ ಜನರು
ಬಂದು ಭೂಮಿಯಲ್ಲಿ ನಿಂದು ॥
ಚಂದ್ರ ಪುಷ್ಕರಿಣೀ ಸ್ನಾನವ ಮಾಡಿ
ಆನಂದದಿಂದಲಿ ರಂಗನನೋಡದ ॥ ೨ ॥

ಹಾರಹೀರ ವೈಜಯಂತಿ
ಘೋರ ಮುತ್ತಿನ ಸರವು ಪದಕ ॥
ತೇರನೇರಿ ಬೀದಿಲಿ ಬರುವ
**ರಂಗವಿಠ್ಠಲ** ರಾಯನ ನೋಡದ ॥ ೩ ॥

ಹೀಗೆ ಕೊಂಡಾಡಿರುವರು.

ಲಕ್ಷ್ಮೀನಾರಾಯಣನಿಗೆ ಮಠದಲ್ಲಿ ಪಾಠಕ್ಕಾರಂಭವಾಯ್ತು. ಸ್ವರ್ಣವರ್ಣರಿಗೆ ವೃದ್ಧಾಪ್ಯ, ದೇಹವು ತೀರ ನಿಃಶಕ್ತಿಯನ್ನು ಹೊಂದಿತು. ಶೇಷಗಿರಿಯಪ್ಪನಲ್ಲಿ ತಮ್ಮ ನಿಶ್ಚಯವನ್ನು ಸೂಚಿಸಿದರು. ಮಗನು ಸಂಸ್ಥಾನಾಧಿಪತಿಯಾಗುವುದು ಶೇಷಗಿರಿಯಪ್ಪನಿಗೆ ಅಪೇಕ್ಷೆಯಿಲ್ಲದಿದ್ದರೂ ದೊಡ್ಡ

---

ಹಾಗೆ ಸೂರ್ಯವಂಶ ಸಂಭವನಾದ ದಶರಥ ಮಹಾರಾಜನು, ನಂತರ ಶ್ರೀರಾಮದೇವರು ತಾವೂ ಲೋಕಶಿಕ್ಷಾರ್ಥವಾಗಿ ಪೂಜಿಸುತ್ತಿದ್ದು, ತಮ್ಮ ಪಟ್ಟಾಭಿಷೇಕವಾಗಿ ಕೆಲವು ಕಾಲದ ಮೇಲೆ ಭಕ್ತನಾದ ವಿಭೀಷಣನಿಗೆ ಪೂಜಿಸಲುಕೊಟ್ಟರೆಂದೂ ಈಗಲೂ ಚಿರಂಜೀವಿಯಾದುದರಿಂದ ವಿಭೀಷಣನು ನಿತ್ಯದಲ್ಲೂ ಗೋಪ್ಯವಾಗಿ ಬಂದು ಪೂಜಿಸಿ ಹೋಗುತ್ತಿರುವನೆಂದೂ ಭಾವುಕರ ನಂಬಿಕೆಯಿದೆ.

ವರ ಆಜ್ಞೆಯು ಶ್ರೇಯಃಪ್ರದವಾದುದೆಂದು ಪತ್ನಿಗೆ ಈ ಸಂಗತಿಯನ್ನು ತಿಳಿಸಿದನು. ಗಿರಿಯಮ್ಮನಿಗೆ ಇದ್ದೊಬ್ಬ ಮಗನು ಸನ್ಯಾಸಿಯಾಗುವುದ ರಲ್ಲಿ ಸ್ವಲ್ಪವೂ ಸಮಾಧಾನವಿಲ್ಲ—ಮಗನನ್ನು ಕೇಳಿದಾಗ ಲಕ್ಷ್ಮೀನಾರಾ ಯಣನು—

"ಅಮ್ಮಾ ನಾನು ಸನ್ಯಾಸಿಯಾಗುವುದರಿಂದ ಅನಿಷ್ಟವೇನಮ್ಮ?"— ಎಂದನು.

**ಗಿರಿಯಮ್ಮ**:—ನಮಗೆ ಮುಂದೆ ದಿಕ್ಕು ಯಾರಪ್ಪ?

**ಲ**:—ಸಕಲ ಜಗತ್ತನ್ನು ರಕ್ಷಿಸುವವನು, ಶ್ರೀಹರಿಯಾಗಿರುವಾಗ ಅವನೇ ಎಲ್ಲರಿಗೂ ದಿಕ್ಕಲ್ಲವೇನಮ್ಮ? ಅವನ ಹೊರತು ಯಾರಿಗೆ ಯಾರು ದಿಕ್ಕು! ಯಾರಿಗೆ ಯಾರು ಗತಿಯಮ್ಮ!

**ಗಿ**:—ನೀನಿನ್ನೂ ಚಿಕ್ಕವನು ಸನ್ಯಾಸಿಯಾದರೆ ಬಹುಕಷ್ಟವಲ್ಲವೆ?

**ಲ**:—ಶ್ರೀಮದಾಚಾರ್ಯರಿಂದ ಪೂಜಿತನಾದ ಗೋಪೀನಾಥನನ್ನು ಪೂಜಿಸುವುದರಿಂದ ಕಷ್ಟವೆಲ್ಲಿ ಬರಬೇಕಮ್ಮ?

**ಶೇ**:—ದೊಡ್ಡವರ ಚಿತ್ತಕ್ಕೂ ಬಂದಿದೆ,ಹುಡುಗನಿಗೂ ಮನಮೆಚ್ಚಿದೆ, ಶ್ರೀಹರಿಯ ಸಂಕಲ್ಪವೇ ಹೀಗಾಗಬೇಕೆಂದಿರುವುದಾಗಿ ತೋರುತ್ತೆ. ಅವನ ಸಂಕಲ್ಪಮಿರಿ ನಡೆವರಾರು? ಯಾರಿಗ್ಯಾರಿಲ್ಲ. ಪುತ್ರಮೋಹವನ್ನು ಬಿಡು. ನಮ್ಮ ವಂಶವು ಈ ರೂಪದಿಂದ ಉದ್ಧಾರವಾಗುವ ಕಾಲ ಬಂದಿತೆಂದು ತಿಳಿ.

**ಗಿರಿಯಮ್ಮ**:—ನಿಮ್ಮ ಮನಸ್ಸಿಗೆ ಒಪ್ಪಿದಮೇಲೆ ದೈವಚಿತ್ತ.

ಶೇಷಗಿರಿಯಪ್ಪನು ಶ್ರೀಗಳವರಲ್ಲಿ ತಮ್ಮಿಬ್ಬರ ಮೌಢ್ಯತೆಗಾಗಿ ಕ್ಷಮಾಯಾಚನೆಮಾಡಿ ಹುಡುಗನಿಗೂ ಸನ್ಯಾಸಾಶ್ರಮದಲ್ಲಿ ಇಚ್ಛೆ ಯಿರುವುದನ್ನು ತಿಳಿಸಿದನು.

ಶೇಷಗಿರಿಯಪ್ಪ ದಂಪತಿಗಳ ಸಮ್ಮತಿಯಿಂದ ಸ್ವರ್ಣವರ್ಣತೀರ್ಥರು ಲಕ್ಷ್ಮೀನಾರಾಯಣನಿಗೆ ಶುಭಮುಹೂರ್ತದಲ್ಲಿ ವಿಧಿಪೂರ್ವಕವಾಗಿ ಸನ್ಯಾಸ ಆಶ್ರಮವಿತ್ತು ಮಂತ್ರೋಪದೇಶಮಾಡಿ, **"ಲಕ್ಷ್ಮೀನಾರಾಯಣ ಯೋಗಿ"** × ಎಂಬ ಆಶ್ರಮನಾಮವಿಟ್ಟು ಅನುಗ್ರಹಿಸಿದರು.

---

× "ಮುನಿ" ಎಂಬ ಪ್ರತೀತಿಯೂ ಇದೆ.

ಎಲ್ಲೋ ದನಗಾವರ ಜೊತೆಯಲ್ಲಿದ್ದವನು ಲಕ್ಷ್ಮೀನಾರಾಯಣ ಯೋಗಿ ಎನಿಸಿ ಶ್ರೀಮದಾನಂದ ತೀರ್ಥರ ವೇದಾಂತ ಸಾಮ್ರಾಜ್ಯದ ಅಧಿಕಾರಿಯಾದನು. ಅಂದಮೇಲೆ ದೈವಾನುಗ್ರಹಪಾತ್ರರಾದರೆ ಜೀವರಿಗೆ ಯಾವ ಪುರುಷಾರ್ಥವು ತಾನೇ ಸಾಧಿಸಲಾರದು?

ಜೀವರುಗಳ ಅನಾದಿಸಿದ್ಧವಾದ ಯೋಗ್ಯತೆಯನ್ನರಿತ ಸರ್ವಜ್ಞನಾದ ಶ್ರೀಹರಿಯು ಯಾವ ಜೀವರಿಂದ ಏನು ಸಾಧನವಾಗಬೇಕೋ ಆ ಸಾಧನವನ್ನು ಎಲ್ಲಿ ಜನಿಸಿದ್ದರೂ ಮಾಡಿಸಿ ಅವರಿಗೆ ತಕ್ಕ ಫಲವನ್ನು ಕೊಡುವನು. ಆದುದರಿಂದಲೇ ಶ್ರೀ ಹರಿಯನ್ನು ವೈಷಮ್ಯರಹಿತನಾದ **ಸಮವರ್ತಿ** ಎಂದು ಶಾಸ್ತ್ರಗಳು ಉದ್ಘೋಷಿಸುತ್ತಿವೆ.

'ದೇವರು ಪಕ್ಷಪಾತಿಯವಾಲ್ಲದುದರಿಂದ ಎಲ್ಲರಿಗೂ ಶ್ರೇಯಸ್ಸನ್ನೇ ನೀಡಬಹುದಲ್ಲ!' ಎಂದು ಕೆಲವರು ಪ್ರಶ್ನಿಸುತ್ತಾರೆ. ಈ ಪ್ರಶ್ನೆಗೆ ಇಷ್ಟೆ ಉತ್ತರವನ್ನು ಪ್ರಕೃತದಲ್ಲಿ ಕೊಡಬಹುದು. ಸಮವರ್ತಿ ಎಂದ ಮಾತ್ರಕ್ಕೆ ಅಪರಾಧಿಯಾದವನನ್ನೂ ಜಡ್ಜನು ಶಿಕ್ಷಿಸದೆ ಬಿಡುವದು ನ್ಯಾಯವೆ? ನಿರಪರಾಧಿಯನ್ನು ಬಿಡುಗಡೆ ಮಾಡಿ ಅಪರಾಧಿಗೆ ಶಿಕ್ಷೆ ವಿಧಿಸುವವನೇ ನ್ಯಾಯಾಧೀಶನಲ್ಲವೆ? ತಂದೆಯೊಬ್ಬನು ಎಲ್ಲ ಮಕ್ಕಳಲ್ಲೂ ಸಮಾನವಾದ ಮಮತೆಯಿರುವವನಾದರೂ ಐದು ವರ್ಷದ ಮಗನಿಗೂ ಹದಿನೈದು ವರ್ಷದ ಮಗನಿಗೂ ಸಮನಾದ ಅಳತೆಯ ಅಂಗಿ ಹೊಲಿಸಿಕೊಡಬೇಕೇನು? ತಾಯಿಯು ಹತ್ತು ತಿಂಗಳ ಕೂಸಿಗೆ ಹಾಲುಣಿಸಿದಂತೆ ಇಪ್ಪತ್ತು ವರ್ಷದ ಕುಂಟೆ ಕೋಣನಂಥಾ ಮಗನಿಗೂ ಸ್ತನ್ಯಪಾನ ಮಾಡಿಸಬೇಕೇನು? ಹಾಗೆ ಮಾಡದಿದ್ದರೆ ತಾಯಿತಂದೆಗಳಿಗೆ ಪಕ್ಷಪಾತವೆನ್ನುವಿರಾ' ಇಷ್ಟೇ ವಿಚಾರವನ್ನು ಪ್ರಶ್ನೆ ಕೇಳಿದವರಿಗೆ ಹೇಳಿದರೆ ಸಾಕು. **ಸಮವರ್ತಿ** ಎಂಬುದರ ಅರ್ಥವನ್ನು ಅವರು ಗ್ರಹಿಸಿಯಾರು.

## ವಿದ್ಯಾಭ್ಯಾಸ

ವೃದ್ಧ ಯತಿಗಳಾದ ಸ್ವರ್ಣವರ್ಣ ತೀರ್ಥರು ತಾವು ನಿಃಶಕ್ತರಾದುದರಿಂದ ಬಾಲಯತಿ ಲಕ್ಷ್ಮೀನಾರಾಯಣ ಯೋಗಿಗಳನ್ನು ಶ್ರೀ ವಿಬು

ಧೇಂದ್ರತೀರ್ಥರಲ್ಲಿ× ವಿದ್ಯಾಭ್ಯಾಸಕ್ಕೆ ಬಿಟ್ಟರು. ವಿಬುಧೇಂದ್ರ ತೀರ್ಥರು ಶ್ರೀಮದಾನಂದತೀರ್ಥರ ಸಾಮ್ರಾಜ್ಯದಲ್ಲಿ ಅಭಿಷಿಕ್ತರಾಗಿ

'ಆಕೇರಳಂ ತಥಾಸೇತುಂ ಆಗಂಗಾಂಚ ಹಿಮಾಲಯಮ್'
ನಿರಾಕೃತಾದ್ವೈತಶೈವಂ ವಿಬುಧೇಂದ್ರ ಗುರುಂ ಭಜೇ ॥'

ಎಂಬುದಾಗಿ ವಿದ್ವನ್ಮಣಿಗಳಿಂದ ಸ್ತುತ್ಯರಾದ ಪರಮ ಉತ್ಕೃಷ್ಟ ಪಂಡಿತರು.

ವಿಬುಧೇಂದ್ರರಿಗೆ ಉತ್ತಮ ಶಿಷ್ಯರು ದೊರೆತಾಗ ಅತ್ಯಾನಂದ ವಾಯ್ತು. ಪ್ರೌಢ ಪಾಠಾರಂಭವಾಯ್ತು ಬಾಲಯತಿ ಲಕ್ಷ್ಮೀನಾರಾಯಣ ಯೋಗಿಗಳಿಗೆ. ಶಿಷ್ಯರ ಗ್ರಹಣಶಕ್ತಿಯಿಂದ ವಿಬುಧೇಂದ್ರರಿಗೆ ಉಭಯ ಸಂಸ್ಥಾನಗಳಿಗೂ ಕೀರ್ತಿಯನ್ನು ತರುವರೆಂದು ನಂಬಿಕೆಯಾಗಿ ಪರಮ ಸಂತೋಷವಾಯ್ತು. ಬಾಲಯತಿಗಳು "ಶ್ರೀಮನ್ನ್ಯಾಯಸುಧೆ"ಯನ್ನು ಓದಿ ಅಸಾಧಾರಣ ಪಂಡಿತರಾದರು. ಇವರ ಕೀರ್ತಿಚಂದ್ರಿಕೆಯು ದಶ ದಿಶೆಗಳಲ್ಲಿ ಪಸರಿಸಿತ್ತು.

## ಲಕ್ಷ್ಮೀನಾರಾಯಣ ಯೋಗಿಗಳು ಶ್ರೀಪಾದರಾಜರೆನಿಸಿದುದು-

ಕೃಷ್ಣಾತೀರ ದೇವದುರ್ಗತಾಲೂಕಿನಲ್ಲಿರುವ ಕೊಪ್ಪವೆಂಬ ಗ್ರಾಮದಲ್ಲಿ ವಿಬುಧೇಂದ್ರರು ನಾರಾಯಣ ಮುನಿಗಳಿಂದ ಕೂಡಿ ಇರುತ್ತಿರಲು ಶ್ರೀಮದುತ್ತರಾದಿ ಮಠಾಧೀರಾದ ಶ್ರೀ ರಘುನಾಥ ತೀರ್ಥ ಶ್ರೀಪಾದಂಗಳವರು ಶ್ರೀಮದಾಚಾರ್ಯರಿಂದ ಪರಂಪರಾಪ್ರಾಪ್ತವಾದ ತಮ್ಮ ಸಂಸ್ಥಾನವನ್ನು ವೈಭವದಿಂದ ಪಾಲಿಸುತ್ತಾ ಇದ್ದವರು ಲಕ್ಷ್ಮೀನಾರಾಯಣ ಮುನಿಗಳ ವಿದ್ಯಾಪ್ರೌಢಿಮೆಯನ್ನು ಕೇಳಿ ವಿದ್ಯಾಪಕ್ಷಪಾತಿಗಳಾದುದರಿಂದ ಬಾಲಯತಿಗಳನ್ನು ನೋಡಲು ಕೊಪ್ಪಕ್ಕೆ ದಿಗ್ವಿಜಯಮಾಡಿದರು. ವಿಬುಧೇಂದ್ರರಿಗೂ ರಘುನಾಥರಿಗೂ ಸಮಾಗಮವಾಯಿತು. ಯತಿವರ್ಯರಿಬ್ಬರೂ

---

× ಶ್ರೀ ವಿಬುಧೇಂದ್ರ ತೀರ್ಥರು ಶ್ರೀ ರಾಘವೇಂದ್ರ ಸ್ವಾಮಿಗಳವರ ಗುರುಪರಂಪರೆಯಲ್ಲಿ ಒಬ್ಬರು. ವಿಬುಧೇಂದ್ರರ ಸಂಸ್ಥಾನವೂ ಶ್ರೀ ಮದಾಚಾರ್ಯರಿಂದ ಪರಂಪರೆಯಾಗಿ ನಡೆದುಬಂದು ವಿಬುಧೇಂದ್ರರ ಪ್ರಶಿಷ್ಯರಾದ ಶ್ರೀ ರಾಘವೇಂದ್ರ ಸ್ವಾಮಿಗಳನಂತರ ಶ್ರೀ ರಾಘವೇಂದ್ರ ಮಠವೆಂದೂ ಶ್ರೀ ಮಂತ್ರಾಲಯ ಮಠವೆಂದೂ ಪೂರ್ವಾದಿ ಮಠವೆಂದೂ ಬೇರೆ ಬೇರೆ ಹೆಸರಿನಿಂದ ಕರೆಸಿಕೊಳ್ಳುತ್ತಿದೆ.

ಪ್ರೇಮಾಲಿಂಗನಮಾಡಿಕೊಂಡರು. ಕುಶಲ ಪ್ರಶ್ನೆಗಳಾಯ್ತು. ಇದು ಸುವರ್ಣಯುಗದ ಸಮಾಚಾರವಾಗಿಯೂ ಕಟ್ಟುಕಥೆಯಾಗಿಯೂ ವಾಚಕರಲ್ಲನೇಕರಿಗೆ ಕಾಣಬಹುದು. ಕಾರಣ ಅವರ ತಪ್ಪಲ್ಲ—ಇಂದು ಮಠಮಠಗಳೊಳಗಿನ ಪರಸ್ಪರ ಸಂಬಂಧವು ಕಡಿದುಹೋಗುತ್ತಬಂದಿದೆ. ಒಬ್ಬ ಯತಿಗಳು ಇನ್ನೊಬ್ಬಯತಿಗಳೊಂದಿಗೆ ಸೇರುವುದೆಂಬುದು ಉತ್ತರದಕ್ಷಿಣ ಧ್ರುವಗಳು ಸೇರುವವೆಂಬುವಷ್ಟು ಆಶ್ಚರ್ಯದ ಸಂಗತಿಯಾಗಿದೆ. ಇದಕ್ಕೆ ಯಾರು ಕಾರಣರೋ ಇದರಲ್ಲಿ ಯಾರತಪ್ಪೋ ಜಗದೀಶ್ವರನೇ ಬಲ್ಲ. ಆದರೆ ಮಠ ಮಠಗಳ ಈ ಜಗಳದಿಂದ ಶಿಷ್ಯರಿಗೆ ಯತಿನಿಂದಾ ಪಾಪ ಸಂಘಟನವೆಷ್ಟೋ ಅಷ್ಟೇ ಲಾಭ. ಮಾತ್ರವಲ್ಲ-ನಾಸ್ತಿಕತೆಯ ಪ್ರವಾಹವು ಉಕ್ಕುತ್ತ ಹರಿಯುತ್ತ ಇರುವ ಈ ಕಾಲದಲ್ಲಿ ಮಠಾಧಿಪತಿಗಳೂ, ತತ್ತ್ವಶೀಯರಾದ ವಿದ್ವಾಂಸರೂ ಪುರೋಹಿತರೂ – ದಿವಾನರೂ (ಪಾರುಪತ್ಯಗಾರರು) ಮೊದಲಾದವರು ಆಯಾಯ ಮಠದ ಸ್ವಾಮಿಗಳಿಗೂ ಇಲ್ಲಸಲ್ಲದ ಅಪಕೀರ್ತಿಕೊಡಿಸಿ ಶಿಷ್ಯವೃಂದಕ್ಕೆ ಯಾವ ಮಠದ ಮೇಲೂ ಸ್ವಲ್ಪವೂ ವಿಶ್ವಾಸ ಹುಟ್ಟದಂಥ ಪರಿಸ್ಥಿತಿಯು ಉಂಟಾಗಲು ಎಡೆಮಾಡಿಕೊಟ್ಟರು. ಕಲಿಗಾಲ ಪ್ರಭಾವ ಬಲವಾಗಿದ್ದರೂ ಸ್ವಲ್ಪ ಸ್ವಲ್ಪ ಗುರುಭಕ್ತಿಯಿದ್ದರೆ ಅದಕ್ಕೂ ಶಿಷ್ಯರುಗಳು ತಿಲಾಂಜಲಿಯನ್ನಿತ್ತು ತಮಗೆ ಗುರುಗಳೂ ಬೇಡ, ಮಠವೂ ಬೇಡಎಂಬ ವೈರಾಗ್ಯದತುತ್ತತುದಿಯನ್ನು ಮುಟ್ಟಲುಕಾರಣರಾಗುತ್ತಿದ್ದಾರೆ. **ಸಂಸ್ಥಾನಾಧಿಪತಿಗಳೆನಿಸಿದವರು ಈ ವಿಚಾರದತ್ತ ಹೆಚ್ಚಿನ ಗಮನವನ್ನಿಟ್ಟು ತಕ್ಕ ವ್ಯವಸ್ಥೆಯನ್ನುಮಾಡಿ ಆಚಾರ್ಯರಪೀಠಸ್ಥರಾದಯತಿಗಳೆಲ್ಲಾ ಸಂಘಟಿತರಾಗುವ ಸುಯೋಗವನ್ನು ಒದಗಿಸಿಕೊಳ್ಳುವ ಯತ್ನವಿಶೇಷವನ್ನು ಮಾಡದಿದ್ದರೆ-ಇನ್ನೂ ಇನ್ನೂ ವೈಷಮ್ಯದ ಮೂಲವನ್ನು ಹುಡುಕುತ್ತಾ ಹೊರಟರೆ ಇವರೀ ಘೋರಣೆಯ ಹಾನಿಯನ್ನು ಇವರು ಮಾತ್ರವಲ್ಲದೆ ಸಮಾಜವೂ ಶಿಷ್ಯವೃಂದವೂ ವಿಶೇಷತಃಅನುಭವಿಸಬೇಕಾಗುವುದೆಂಬುದನ್ನು ಮಾಧ್ವಪೀಠಗಳ ಉನ್ನತಿಯನ್ನು ಬಯಸುವ ಪ್ರತಿಯೊಬ್ಬ ಯತಿಗಳೂ ಒಪ್ಪತಕ್ಕ ವಿಷಯವಾಗಿದೆ.** ಈಗಿನ ಪರಿಸ್ಥಿತಿಯನ್ನು ನೋಡಿದರೆ ಹಿಂದೆ ನಡೆದ ಯತಿವರ್ಯರುಗಳ ಸಮಾಗಮವು ಆಶ್ಚರ್ಯವನ್ನುಂಟು ಮಾಡುವುದರಲ್ಲಿ ಸಂದೇಹವಿಲ್ಲ-

ವಿಬುಧೇಂದ್ರರ ಸಮೀಪದಲ್ಲಿದ್ದ ಬಾಲಯತಿಗಳ ತೇಜಸ್ಸನ್ನು ಕಂಡ ರಘುನಾಥರಿಗೆ ಅದೆಷ್ಟು ಆನಂದವಾಯ್ತೆಂದು ವರ್ಣಿಸಲಳವಲ್ಲ. ಬಾಲ ಯತಿಗಳಿಗೆ **ಶ್ರೀಮನ್ನ್ಯಾಯ ಸುಧಾ** ಪಾಠವಾಗಿರುವುದನ್ನು ಕೇಳಿ ರಘು ನಾಥ ಯತಿಗಳು ಒಂದು ಕಗ್ಗಂಟಿನ ಪ್ರಶ್ನೆಯನ್ನು ಹಾಕಿದರು. ಇಂಥಾ ಸುಸಂದರ್ಭವು ಯಾವಾಗ ಒದಗೀತೋ ಎಂದು ಕಾದಿದ್ದ ಬಾಲಯತಿಗಳು ಉಭಯಯತಿಗಳ ಅನುಜ್ಞೆಯನ್ನು ಸ್ವೀಕರಿಸಿ ರಘುನಾಥರ ಪ್ರಶ್ನೆಗೆ ಉತ್ತರ ವನ್ನು ಕೊಡುತ್ತಾ ಗಂಗಾಪ್ರವಾಹದಂತೆ ಯಾವುದೋ ಒಂದು ಪ್ರಕರಣದ ಕುರಿತಾದುದಾದರಿಂದ ಪ್ರಶ್ನೆಗೆ ಸಮರ್ಪಕ ಉತ್ತರವನ್ನು ಕೊಡುವುದರೊಂ ದಿಗೆ ನ್ಯಾಯಸುಧೆಯ ಸಾರವನ್ನೆಲ್ಲಾ ಸಂಗ್ರಹಿಸಿ ಹೇಳಿ ತಮ್ಮ ಉಪನ್ಯಾಸ ವೈಖರಿಯಿಂದಲೂ ಪೂರ್ವಪಕ್ಷ ಸಿದ್ಧಾಂತಗಳ ಸಮನ್ವಯ ಮಾಡುವ ವಿಧಾನದಿಂದಲೂ ಯುಕ್ತಿಯುಕ್ತವಾಗಿ ಉದಾಹರಿಸುವ ಉದಾಹರಣೆ ಗಳಿಂದಾಗಿಯೂ ರಘುನಾಥ ಯತಿಗಳಿಗೆ ಅಮಿತಾನಂದವನ್ನುಂಟುಮಾಡಿ ದರು. ಬಾಲಯತಿಗಳ ಪ್ರತಿಭೆಗೆ ಬೆರಗಾದ ರಘುನಾಥರು "ಬಾಲಯತಿ ಗಳೇ ನೀವು ವಯಸ್ಸಿನಲ್ಲಿಯೂ ಆಶ್ರಮದಲ್ಲಿಯೂ ಚಿಕ್ಕವರಾದರೂ ವಿದ್ವತ್ತಿ ನಲ್ಲಿ ಹಿರಿಯರಾಗಿರುವಿರಿ. ಶ್ರೀಮದಾನಂದ ತೀರ್ಥರ ಪೂರ್ಣಾನುಗ್ರಹ ಪಾತ್ರರು ನೀವು" ಎಂದು ಕೊಂಡಾಡಿದರು. ಆಗ ಬಾಲಯತಿಗಳು ವಿನಯದಿಂದ 'ನಾವಿನ್ನೂ ವಿದ್ಯಾರ್ಥಿಗಳು, ತಾವು ಶ್ರೀಪಾದಂಗಳವರು ತಮ್ಮಂಥ ದೊಡ್ಡವರ ಅನುಗ್ರಹವಾದರೆ ಶ್ರೀಮದಾಚಾರ್ಯರ ಅನುಗ್ರಹ ವಾಗುವುದು' ಎಂದರು. ವಿದ್ಯಾವಿನಯಗಳಿಗೆ ರಘುನಾಥರು ಮನಸೋತು 'ನಿಜ! ನೀವು ಹೇಳಿದಂತೆ ನಾವು ಶ್ರೀಪಾದಂಗಳವರು ನೀವು **ಶ್ರೀಪಾದ ರಾಜರು'** ಎಂಬುದಾಗಿ ಅತಿಶಯ ಪ್ರೇಮದಿಂದ ಹೇಳಿ **"ನಿಮ್ಮಿಂದ ದ್ವೈತ ಮತಕ್ಕೇ ಕೀರ್ತಿ. ಶ್ರೀಮದಾಚಾರ್ಯರಂತೆಯೂ ಟೀಕಾಕೃತ್ಪಾದ ರಂತೆಯೂ ಅವರುಗಳ ಅನುಗ್ರಹದಿಂದ ಲೋಕವಿಖ್ಯಾತರಾಗುವಿರಿ. ನಿಮ್ಮಿಂದ ಭಾಗವತ ಧರ್ಮದ ಪುನರುದ್ಧಾರವಾಗಿ ಸುಜೀವರುಗಳಿಗೆ ಮಾರ್ಗದರ್ಶಕರಾಗುವಿರಿ ಈ ಮಾತಿಗೆ ನಮ್ಮ ಉಪಾಸ್ಯಮೂರ್ತಿಯೇ ಸಾಕ್ಷಿ!' ಎಂದರು. ವಿಬುಧೇಂದ್ರರು "ಸತ್ಯ-ಸತ್ಯ" ಎಂದರು.**

ವೇದವ್ಯಾಸದೇವರಿಂದ ರಚಿತವಾದ ಜಯಾಖ್ಯ ಗ್ರಂಥವು ಬ್ರಹ್ಮ ದೇವರ ಮುಖದಿಂದ ಭಾರತವೆಂಬ ಹೆಸರಿನಿಂದ ಕರೆಸಿಕೊಂಡ ಮೇಲೆ ಹೇಗೆ ಭಾರತವೆಂದೇ ಪ್ರಸಿದ್ಧಿಗೆ ಬಂದಿತೋ ಹಾಗೇ ಲಕ್ಷ್ಮೀನಾರಾಯಣ ಯೋಗಿಗಳು ರಘುನಾಥರ ಮುಖದಿಂದ ಶ್ರೀಪಾದರಾಜರು ಎಂದು ಕರೆಸಿಕೊಂಡ ಮೇಲೆ ಶ್ರೀಪಾದರಾಜರೆಂದೇ ಪ್ರಸಿದ್ಧರಾದರು.

ಶ್ರೀಪಾದರಾಜರು ವಿದ್ಯಾಗುರುಗಳಿಂದ ಅಪ್ಪಣೆ ಪಡೆದು ಸ್ವಗುರುಗಳ ಸನ್ನಿಧಿಗೆ ಬಂದರು. ತಮ್ಮ ವ್ಯಾಸಂಗ ವಿಷಯವನ್ನೂ ರಘುನಾಥ ತೀರ್ಥರ ಮೆಚ್ಚುಗೆಗೆ ಪಾತ್ರರಾದುದನ್ನೂ ನಿವೇದಿಸಿದರು. ಶಿಷ್ಯರ ಮೇಲ್ಮೆಯಿಂದ ಸ್ವರ್ಣವರ್ಣರಿಗೆ ಅಸದೃಶಾನಂದವಾಗಿ ಹರ್ಷಾಶ್ರುಗಳನ್ನು ತುಂಬಿಕೊಂಡು "ನಿಮ್ಮಿಂದ ಭಾಗವತ ಧರ್ಮದ ಪುನರುದ್ಧಾರವಾಗಲಿ- ನೀವು ಸುಜೀವರುಗಳಿಗೆ ಮಾರ್ಗದರ್ಶಕರಾಗಿರಿ. ಮುಖ್ಯವಾಗಿ ಹರಿಗುರುಗಳ ಸೇವೆಯು ನಿಮ್ಮಿಂದ ಸದಾನಡೆಯುತ್ತಿರಲಿ" ಎಂಬುದಾಗಿ ಹರಸಿ, ಶ್ರೀಮದಾನಂದ ತೀರ್ಥರ ವೇದಾಂತ ಸಾಮ್ರಾಜ್ಯಾಭಿಷಿಕ್ತರನ್ನಾಗಿ ಮಾಡಿ ಪೀಠಾಧಿಪತ್ಯವನ್ನು ನಿರ್ವಹಿಸಲು ಆಜ್ಞೆಯನ್ನಿತ್ತರು.

ಕೆಲವು ದಿನಗಳಲ್ಲಿ ಸ್ವರ್ಣವರ್ಣರು ವೃಂದಾವನಸ್ಥರಾದರು. ಶ್ರೀಪಾದ ರಾಜರು ಗುರುಗಳ ಮಹಾಸಮಾರಾಧನೆಯನ್ನು ಅತಿ ವೈಭವದಿಂದ ನೆರವೇರಿಸಿದರು.

## ಭಾಗವತ ಧರ್ಮೋದ್ಧಾರವು

ಶ್ರೀಮದಾಚಾರ್ಯರು ಭಾಗವತಧರ್ಮವನ್ನು ಪ್ರಚುರಪಡಿಸಿದ ಮೇಲೆ ನರಹರಿತೀರ್ಥರ ಕಾಲದಲ್ಲಿ ಸ್ವಲ್ಪಮಟ್ಟಿಗೆ ಈ ಧರ್ಮದ ಪ್ರಚಾರ ನಡೆಯಿತು. ಆ ಮೇಲೆ ಈ ಧರ್ಮವು ಪುನಃ ಬೆಳಕಿಗೆ ಬಂದುದು ಆಚಾರ್ಯರ ಶಿಷ್ಯರಾದ ಪದ್ಮನಾಭ ತೀರ್ಥರಿಂದ ಒಂಭತ್ತನೆಯವರಾದ ಶ್ರೀಪಾದ ರಾಜರ ಕಾಲದಲ್ಲಿ.

ನವವಿಧ ಭಕ್ತಿಯ ತವರೇ ಭಾಗವತ ಧರ್ಮ. ಈ ಭಾಗವತ ಧರ್ಮವೆಂಬುದು ಅನಾದಿಯಾದುದು. ಭಗವಂತನು ಹೇಗೆ ಅನಾದಿ ನಿಧ

.ನಸೋ ಭಗವಂತನಲ್ಲಿ ಮಾಡುವ ಭಕ್ತಿ ಪೂರಿತವಾದ ಧರ್ಮಾನುಷ್ಠಾನವೂ ಭಗವಂತನ ಪೂರ್ಣಅನುಗ್ರಹಕ್ಕೆ ಸಾಧನೀಭೂತವಾಗಿರುವ ಈ ಭಾಗವತ ಧರ್ಮವೂ ಅನಾದಿಯು, ನಾಶವಿಲ್ಲದುದು. ಮಧ್ಯೆ ಮಧ್ಯೆ ಈ ಧರ್ಮವನ್ನು ಮೋಡವು ಸೂರ್ಯನನ್ನಾವರಿಸುವಂತೆ ಭಗವದಿತರ ವಿಷಯಗಳಲ್ಲೇ ಆಸಕ್ತರಾದ ಮೂಢರು ತಮ್ಮ ಅಸದುಪದೇಶದ ಆವರಣ ಹಾಕಿ-ಇದು ಪ್ರಕಾಶಕ್ಕೆ ಬರದಂತೆ ತಡೆಯಾಗುತ್ತಾರೆ. ಆಗಾಗ ಜ್ಞಾನಿಗಳೆಂಬ ಜಂಝಾವಾತಗಳು ಈ ಮೋಡವನ್ನು ಚದರಿಸಿ ಈ ಧರ್ಮವನ್ನು ಪ್ರಕಾಶಕ್ಕೆ ತರುತ್ತಾರೆ.

ಭಕ್ತಿಯೆಂಬುದು ಪ್ರೇಮರಸ. ಅವರವರ ಶ್ರದ್ಧೆಯಿಂದ ಭಕ್ತಿಯ ಮಟ್ಟವನ್ನು ಅವರವರೇ ಅಳೆದುಕೊಳ್ಳಬಹುದು. ಮುಖ್ಯತಃ ಭಗವಂತನ ಚರಣಾರವಿಂದಗಳಲ್ಲಿ ಅತ್ಯಂತ ಪ್ರೇಮವನ್ನು ಹರಿಯಿಸಿ 'ತಸ್ಯ ಪುತ್ರಾತ್ಪ್ರೇಯಃ' 'ತಸ್ಯ ಪಿತ್ರಾತ್ಪ್ರೇಯಃ' ಇತ್ಯಾದಿ ಶ್ರುತಿಗಳಲ್ಲಿ ಉಕ್ತವಾದಂತೆ ಎಲ್ಲಕ್ಕಿಂತಲೂ ಆ ಸ್ವಾಮಿಯೇ ನಮಗೆ ಪ್ರಿಯತಮನೆಂದು ತಿಳಿಯುವುದು ಭಕ್ತಿಯ ಭವ್ಯತೆಯು. ಈ ಭಕ್ತಿ ಮಾರ್ಗವು ವೇದೋಕ್ತ ಧರ್ಮವಾದುದರಿಂದ ಸನಾತನವು. ಆರ್ಯರಿಂದ ಸೇವಿತವಾದುದು. ಆದುದರಿಂದ ಮಹಾಫಲಪ್ರದವು.

"ಶ್ರದ್ಧಾಂ ದೇವಾಯಜಮಾನಾ ವಾಯುಗೋಪ ಉಪಾಸತೇ ||

ಋಗ್ವೇದ ೧೦—೧೫

"ನಾಯಮಾತ್ಮಾ ಪ್ರವಚನೇನಲಭ್ಯಃ"—ಕಾಠಕೋಪನಿಷತ್

ಅಶ್ರದ್ಧಯಾ ಹುಂ ದತ್ತಂ ತಪಸ್ತಪ್ತಂ ಕೃತಂಚಯತ್
ಅಸದಿತುಚ್ಯತೇ ಪಾರ್ಥ ನಚತತ್ಪ್ರೇತ್ಯ ನೋ: ಇಹ ||

ಗೀತಾ—೧೭—೨೮

ಶ್ರದ್ಧದಾನಾ ಮತ್ಪರಮಾ ಭಕ್ತಾಸ್ತೇsತೀವ ಮೇ ಪ್ರಿಯಾಃ ।

ಇತ್ಯಾದಿ ವೇದ ಉಪನಿಷತ್ತುಗಳ ಮತ್ತು ಗೀತಾವಾಕ್ಯಗಳಿಂದ ನಾವು ಭಕ್ತಿಯ ಮತ್ತು ಭಕ್ತಿಯ ಫಲವನ್ನು ಸಾಧಿಸುವ ಭಕ್ತಿಯ ಸಹಕಾರಿಣಿಯೂ ಪ್ರತಿರೂಪವೂ ಆದ ಶ್ರದ್ಧೆಯ ಪ್ರಾಚೀನತೆಯನ್ನು ಅರಿಯಬಹುದು.

ಈ ಆಧಾರವಾಕ್ಯಗಳಿಂದ ನಾವು ತಿಳಿಯಬೇಕಾದುದೇನೆಂದರೆ — ಪವಿತ್ರವಾದ ಭಾಗವತ ಧರ್ಮವೂ, ಭಗವದ್ಭಕ್ತಿಯೂ, ಭಗವದ್ಭಕ್ತರೂ ಇವೆಲ್ಲವೂ, ಇವರೆಲ್ಲರೂ, ಯಾರನ್ನುದ್ದೇಶಿಸಿ ನಡೆಯುವರೋ ಆ ಭಗವಂತನೂ ನಿತ್ಯರಾದವರಾದುದರಿಂದ ಭಕ್ತಿ ಪಂಥವನ್ನು ಆ ಪಾಂಥಿಕರನ್ನೂ (ಹರಿದಾಸರನ್ನು) ಸೋಮಾರಿಗಳೆಂದು ಮಾತ್ರ ತಿಳಿಯಬಾರದು.

ಜೀವನದ ಸೊಗಸೇ ಪ್ರೇಮ. ಮಾನವನು ಇದರ ಪೂರ್ಣ ಅರಿವನ್ನು ಪಡೆಯಲು ಅರ್ಹನು. ಹಾಗೆ ಅರ್ಹತೆಯನ್ನು ಪಡೆಯಲು ಅವನು ಭಾವಜೀವಿಯಾಗಿರಬೇಕು. ಆ ಭಾವವು ಪವಿತ್ರವೆನಿಸಬೇಕಾದರೆ ದೇವನ ಚರಣಗಳಲ್ಲಿ ನೆಲೆಗೊಳ್ಳಬೇಕು–ಇದರಿಂದ ಜೀವಿಯು ದೇವನಿಂದ ದತ್ತವಾದ ದೇಹದಿಂದ ಜೀವನದ ಗುರಿಯನ್ನು ಪಡೆದು ಕೃತಾರ್ಥನೆನಿಸುವನು.

ಇಂಥಾ ಉತ್ತಮ ಮಾರ್ಗವನ್ನು ಶ್ರೀಮನ್ಮಧ್ವಾಚಾರ್ಯರು ತೋರಿಕೊಟ್ಟಿರುವರು. ಆಚಾರ್ಯರ ಕಾಲದ ತನಕ ಈ ಮಾರ್ಗ ಪ್ರಚಾರವು ವಿಶೇಷತಃ ದೇವಭಾಷೆ—ವೇದಭಾಷೆ ಎನಿಸಿದ ಸಂಸ್ಕೃತದಲ್ಲೇ ನಡೆಯುತ್ತಿತ್ತು. ಆಚಾರ್ಯರೂ ಸಂಸ್ಕೃತದಲ್ಲೇ ಹೆಚ್ಚಾಗಿ ಗ್ರಂಥಗಳನ್ನು ರಚಿಸಿದರು. §

ವೇದಗಳು ಅರ್ಥವಾಗದಿರಲು—ಸೂತ್ರಗಳು, ಅವುಗಳೂ ಅರ್ಥವಾಗದಿರಲು ಪುರಾಣಗಳು, ಅವುಗಳಿಂದಲೂ ಯಥಾರ್ಥ ಜ್ಞಾನವನ್ನು ಹೊಂದಲು ಶಕ್ತಿಯಿಲ್ಲದವರಿಗಾಗಿ ವೇದಾರ್ಥ ರೂಪಗಳಾಗಿರುವ ಸೂತ್ರ-ಪುರಾಣವಾಕ್ಯಗಳಿಗೆ ಆಚಾರ್ಯರು ಅರ್ಥವನ್ನು ಬರೆಯುವ ಮೂಲಕ ಮೂಲ ಮೂವತ್ತೇಳು ಗ್ರಂಥಗಳನ್ನು (ಈ ಗ್ರಂಥಗಳಿಗೆ **ಸರ್ವಮೂಲ** † ವೆನ್ನುವರು) ರಚಿಸಿದರು.

ನರಹರಿತೀರ್ಥರ ಕಾಲದಲ್ಲೇ ಆಚಾರ್ಯರ ಗ್ರಂಥಗಳ ಸಾರವನ್ನು ಹೀರುವ ಶಕ್ತಿಯುಳ್ಳವರ ಸಂಖ್ಯೆಯು ತಗ್ಗುತ್ತ ಬರಲು ನರಹರಿತೀರ್ಥರು

---

§ ಶ್ರೀಮನ್ಮಧ್ವಾಚಾರ್ಯರು ತಮ್ಮ ಸ್ವಂತ ಭಾಷೆಯಾದ ತುಳುವಿನಲ್ಲೂ ಕೆಲವು ಗ್ರಂಥಗಳನ್ನು ರಚಿಸಿರುವರೆಂಬ ಐತಿಹ್ಯವಿದೆ.

† ಮಾಧ್ವರಿಗೆ ಇದೇ ಶಾಂತಿ ಗ್ರಂಥವು.

ತಮ್ಮ ಮಾತೃಭಾಷೆಯಲ್ಲಿ ಆಚಾರ್ಯರು ಪ್ರಚಾರಪಡಿಸಿದ ದಿವ್ಯತತ್ತ್ವಗಳಲ್ಲಿ ಕೆಲವನ್ನು ಪದ್ಯ ರೂಪದಲ್ಲಿ ರಚಿಸಿದರು×. ಶ್ರೀಪಾದರಾಜರ ಕಾಲದಲ್ಲಿ ಈ ವಿಧಾನದಿಂದ ತತ್ತ್ವಪ್ರಚಾರವಾಗಬೇಕಾದ ಅವಶ್ಯಕತೆಯು ಹೆಚ್ಚಾಯಿತ್ತು. ಕಾರಣವೇನೆಂದರೆ—ಆಚಾರ್ಯರ ಗ್ರಂಥಗಳೂ ಅರ್ಥವಾಗದ ಹೊತ್ತು ಬಂತು. ನರಹರಿ ತೀರ್ಥರ ನಂತರ ಟೀಕಾರಚನೆಯು † ಜಯತೀರ್ಥರಿಂದಾಗಿ ಪರಮೋಪಕಾರವಾಯ್ತು. ಆದರೆ ಶ್ರೀಪಾದರಾಜರಕಾಲವಲ್ಲೇ ಜಯತೀರ್ಥರಿಂದ ರಚಿತವಾದ ಸುಧಾಗ್ರಂಥವನ್ನು ನೋಡುವವರು ವಿರಳರಾಗುತ್ತಾ ಬಂದಿರಬೇಕು—ಅಲ್ಲದೇ ಆಪಾಮರರೂ ತತ್ತ್ವಗಳನ್ನು ತಿಳಿಯಲೆಂಬ ಅನುಕಂಪವೂ ಶ್ರೀಪಾದರಾಜರಲ್ಲಿ ತುಂಬಿರಬೇಕು. ಅದಕ್ಕಾಗಿ ಶ್ರೀಪಾದರಾಜರು ಆಸೇತುಹಿಮಾಚಲ ಪರಿಯಂತರ ಸಂಚರಿಸುತ್ತಾ, ತಮ್ಮ ಮಾತೃಭಾಷೆಯಾದ ಕನ್ನಡದಲ್ಲಿ ವೇದಾರ್ಥ ಪ್ರತಿಪಾದಕಗಳಾದ ಸರ್ವಜ್ಞರ ವರಶಾಸ್ತ್ರವನ್ನು ಪದಸುಳಾದಿ ಉಗಾಭೋಗಗಳ ರೂಪದಿಂದ ರಚಿಸುತ್ತಾ ತಮ್ಮ ಬಿಂಬಮೂರ್ತಿಯಾದ **ರಂಗವಿಠ್ಠಲ**ನಿಗೆ ಅರ್ಪಿಸುತ್ತಾ ಜನರನ್ನು ಸನ್ಮಾರ್ಗದಲ್ಲಿ ಪ್ರವರ್ತಿಸುವಂತೆ ಎಚ್ಚರಿಸಿದರು.

## ಭಾಷೆಯು ಮುಖ್ಯವಲ್ಲ ನೀತಿ ಮತ್ತು ಪ್ರಯೋಜನವು ಮುಖ್ಯ

ಆದರೆ ಶ್ರೀಪಾದರಾಜರ ಕಾಲದಲ್ಲಿ ಕೆಲಜನ ಪಂಡಿತರು ವ್ಯವಹಾರಕ್ಕಾಗಿ ಮಾತ್ರ ಇತರ ಭಾಷೆಯನ್ನು ಉಪಯೋಗಿಸುತ್ತಿದ್ದರು. ಅಷ್ಟೇ ಅಲ್ಲದೆ ಬೇರಾವ ಸಂದರ್ಭಗಳಲ್ಲೂ ಗೀರ್ವಾಣ ಭಾಷೆಯನ್ನಲ್ಲದೆ ಬೇರಾವುದನ್ನೂ ಉಪಯೋಗಿಸುತ್ತಿದ್ದಿಲ್ಲ. ಗೀರ್ವಾಣ ಭಾಷೆಯು ಶ್ರೇಷ್ಠವೂ

× ನರಹರಿ ತೀರ್ಥರ ಮಾತೃಭಾಷೆಯು ಮಹಾರಾಷ್ಟ್ರ ಭಾಷೆಯೆಂದೂ, ಇವರ ಸಂಚಾರವು ಕರ್ಣಾಟಕದಲ್ಲಿ ಹೆಚ್ಚಾದುದರಿಂದ ಕನ್ನಡದಲ್ಲೇ (ದೇಶಭಾಷೆಯಲ್ಲೇ) ರಚಿಸಿದರೆಂದೂ ಕೆಲವರ ಅಭಿಪ್ರಾಯವು.

† ಶ್ರೀಮನ್ಮಧ್ವಾಚಾರ್ಯರು ಎಂಟನೇ ಶತಮಾನದವರೆಂದೂ ಜಯತೀರ್ಥರು ಒಂಭತ್ತನೇ ಶತಮಾನದವರೆಂದೂ ಶ್ರೀಪಾದರಾಜರು ಹದಿನಾಲ್ಕನೇ ಶತಮಾನದವರೆಂದೂ ಶೋಧಕರ ಅಭಿಪ್ರಾಯವು.

ಅತ್ಯಂತ ಪವಿತ್ರವೂ ನಿಜ. ಆದರೆ ಗೀರ್ವಾಣ ಭಾಷೆಯಿಂದ ಆಗಬೇಕಾದಷ್ಟು ಜನತಾ ಉಪಕಾರವು ಜನತೆಗೆ ಆಗದಿರುವ ಕಾಲದಲ್ಲಿ ದೇಶಭಾಷೆಯ ಉಪಯೋಗದಿಂದ ಆಗಬಾರದೆಂದಿಲ್ಲ. ಆದರೆ ಈ ಪಂಡಿತರುಗಳು ಇತರ ಭಾಷೆಯನ್ನು ಯಾವಾಗಲೂ ಉಪಯೋಗಿಸದಿದ್ದರೆ ಒಳ್ಳೆತೆಂದೂ, ಮಡಿಯಲ್ಲಿದ್ದಾಗ ಸರ್ವಥಾ ಗೀರ್ವಾಣೇತರ ಭಾಷಾ ಉಚ್ಚಾರಮಾಡಿದರೆ ಮ್ಲೇಚ್ಛ ಭಾಷಾ ಉಚ್ಚಾರಣೆಯಿಂದ ಒದಗಬಹುದಾದ ಪಾಪವು ಒದಗುವುದು ಎಂದೂ ಸಾಮಾನ್ಯರ ಬಾಯಿಯನ್ನು ಕಟ್ಟುವ ಕಪಿಮುಷ್ಟಿಯುವರಾಗಿದ್ದರು. ಶ್ರೀಪಾದರಾಜರು ಮಾತ್ರ ಈ ಘೋರಣೆಯನ್ನು ಒಪ್ಪಲಿಲ್ಲ. ಮಾತ್ರವಲ್ಲ ತಮ್ಮ ಕೃತಿಯಿಂದ ಖಂಡಿಸಿಯೂ ಖಂಡಿಸಿದರು. ದೇವಪೂಜಾಕಾಲದಲ್ಲೂ ತಾವು ಕನ್ನಡದಲ್ಲಿ ದೇವರ ನಾಮಗಳನ್ನು ಹಾಡುತ್ತಾ ಶಿಷ್ಯರುಗಳಿಂದ ಹಾಡಿಸುತ್ತಾ ಕನ್ನಡ (ಅಥವಾ ಇನ್ನಿತರ ಭಾಷೆಗಳಿಂದ) ದೇವರನ್ನು ಕೊಂಡಾಡುವುದು ಪಾಪಕರವಲ್ಲ, ದೇವತಾನುಗ್ರಹಪಾತ್ರರಾಗಲು ಪರಮ ಸುಲಭೋಪಾಯವೆಂದು ತಿಳಿಸಿದರು. ಅಲ್ಲದೆ ಸಂಸ್ಕೃತದ ಗಂಧಗಾಳಿಯಿಲ್ಲದವರು ಅಪದ್ಧವಾಗಿ ದೇವರ ಸ್ತೋತ್ರವನ್ನು ಮಾಡಿ ಅನರ್ಥಕ್ಕೆ ಗುರಿಯಾಗುವುದರಿಂದ ಇದೇ ಎಷ್ಟೋ ಉತ್ತಮವೆಂದು ಅವರ ವಾದ. ಆದರೆ ಸಂಸ್ಕೃತಜ್ಞರು ಸಂಸ್ಕೃತದಲ್ಲಿ ಸ್ತುತಿಸಬಾರದೆಂದು ಅಲ್ಲ. ಆದರೆ ಅವರೂ ಕನ್ನಡದಲ್ಲಿ ದೇವರನ್ನು ಕೊಂಡಾಡಿದರೆ ಮೈಲಿಗೆಯಾಗುವುದಿಲ್ಲವೆಂದು ಶ್ರೀಪಾದರಾಜರ ನಡವಳಿಕೆಯ ನೀತಿ—ಇದನ್ನೇ ಶ್ರೀಮಜ್ಜಗನ್ನಾಥದಾಸರು ತಾವು ರಚಿಸಿರುವ ಶ್ರೀಹರಿಕಥಾಮೃತಸಾರದಿಂದ ತಿಳಿಸಿರುವರು —

ಆದರ್ಶವಗತಾಕ್ಷ ಭಾಷಾ
ಭೇದದಿಂದಲಿ ಕರೆಯಲದನು ನಿ
ಷೇಧಗೈದವಲೋಕಿಸದೆ ಬಿಡುವರೆ ವಿವೇಕಿಗಳು
ಮಾಧವನ ಗುಣಪೇಳ್ವ ಪ್ರಾಕೃತ
ವಾದರೆಯು ಸರಿ ಕೇಳಿ ಪರಮಾ
ಲ್ಹಾದ ಬಡದಿಪ್ಪರೆ ನಿರಂತರ ಬಲ್ಲ ಕವಿ ಜನರು

ಆದರ್ಶ = ಕನ್ನಡಿ. ಅಗತಾಕ್ಷ = ಕುರುಡ.

ತಾತ್ಪರ್ಯ—ಕನ್ನಡದ ಕವಿತ್ವದ ಸವಿಯರಿಯದ ಸಂಸ್ಕೃತಜ್ಞನೊಬ್ಬನು ಕನ್ನಡವು ಪ್ರಾಕೃತ(=ರಚಿಸಲ್ಪಟ್ಟುದು) ಸಂಸ್ಕೃತದಂತೆ ಅಪ್ರಾಕೃತ(=ಯಾರಿಂದಲೂ ರಚಿಸಲ್ಪಡದೆ ನಿತ್ಯವಾಗಿರುವುದು)ವಲ್ಲ- (ತಾನು ಸಂಸ್ಕೃತವನ್ನೇ ಬಲ್ಲವನಾದ ಮೇಲೆ ಈ ಕನ್ನಡದಲ್ಲೇನಿದೆ ಎಂಬ ದುರಭಿಮಾನದಿಂದ) ಎಂದು ಕನ್ನಡ ಭಾಷೆಯನ್ನು ತಿರಸ್ಕರಿಸಿದನೆಂದ ಮಾತ್ರಕ್ಕೆ—ಕುರುಡನು ಕನ್ನಡಿಯಿಂದೇನು ಫಲವೆಂದು ಕನ್ನಡಿಯನ್ನು ತಿರಸ್ಕರಿಸಿದ ಮಾತ್ರಕ್ಕೆ ಹೇಗೆ ಕಣ್ಣಿದ್ದವರು ಕನ್ನಡಿಯನ್ನು ಹಳಿಯರೋ ಹಾಗೆ ಕವಿಜನರು ಕನ್ನಡವೆಂದಮಾತ್ರಕ್ಕೇ ತಿರಸ್ಕರಿಸರು. ಅಥವಾ ಸಂಸ್ಕೃತೇತರ ಯಾವ ಭಾಷೆಯನ್ನೂ ಸ್ವೀಕರಿಸದಿರಲಾರರು. ಕವಿತ್ವದ ರುಚಿಗಾಗಿ ಅದನ್ನು ಸವಿದೇ ಸವಿಯುವರು. ಗುಣವನ್ನು ಸ್ವೀಕರಿಸುವುದು ಕವಿಗಳ ಗುಣ. ತತ್ರಾಪಿ ಲಕ್ಷ್ಮೀಪತಿಯ ಗುಣಾನುವರ್ಣನವು ಕನ್ನಡದಲ್ಲಿದೆ ಎಂದ ಮಾತ್ರಕ್ಕೇ ಜ್ಞಾನಿಗಳು ತಿರಸ್ಕರಿಸುವರೇ? ಎಂದಿಗೂ ಇಲ್ಲ—ಹಾಗೆ ತಿರಸ್ಕರಿಸುವವರು ಅಜ್ಞಾನಿಗಳು (ಕುರುಡರು) ಎಂದು ದಾಸರಾಯರ ಅಭಿಪ್ರಾಯವು.

**ಭಗವದ್ಗುಣಾನುವರ್ಣನಪೂರ್ವಕ ಕವಿತ್ವದ ಸವಿಯಿಂದ ತುಂಬಿರುವ ಯಾವಕೃತಿಯು ಯಾವ ಭಾಷೆಯಲ್ಲಿದ್ದರೂ ಯಾವ ಕಾಲದಲ್ಲೂ ಅದು ಜ್ಞಾನಿಗಳಿಂದ ಆದರಣೀಯವಾಗಿರುತ್ತದೆ.** ಎಂಬುದು ದಾಸರಾಯರ ಪದ್ಯದ ಹೃದಯವು. ಹರಿಕಥಾಮೃತ ಸಾರದಲ್ಲೇ ಇನ್ನೊಂದು ಪದ್ಯದಲ್ಲಿ

ಪ್ರಾಕೃತೋಕ್ತಿಗಳೆಂದು ಬರಿದೆ ಮ
ಹಾಕೃತಜ್ಞರು ಜರಿವರಲ್ಲದೆ
ಸ್ವೀಕೃತವ ಮಾಡದಲೆ ಬಿಡುವರೆ ಸುಜನರಾದವರು
ಶ್ರೀಕೃತೀಪತಿಯಮಲಗುಣಗಳು
ಈ ಕೃತಿಯೊಳುಂಟಾದ ಬಳಿಕ
ಪ್ರಾಕೃತವೆ? **ಸಂಸ್ಕೃತದ ಸಡಗರವೇನು ಸುಜನರಿಗೆ**

|| ೫—೩೩ ||

ಮಹಾಕೃತಜ್ಞರು=ಸಂಸ್ಕೃತದಲ್ಲಿ ಮಹಾಕೃತಜ್ಞತೆ ಉಳ್ಳವರು.

ಸಂಸ್ಕೃತದಲ್ಲಿ ಒಂದು ಗ್ರಂಥವಿದೆ ಅದರಲ್ಲಿ ಏನೂ ಸಾರವಿಲ್ಲ ಮುಖ್ಯವಾಗಿ ದೇವರ ವಿಷಯುವೇಇಲ್ಲ. ಬರಿಯ ಅಶ್ಲೀಲ ವಿಚಾರಗಳು ತುಂಬಿಕೊಂಡಿವೆ ಎಂದು ತಿಳಿಯೋಣ. ಸಂಸ್ಕೃತ ಎಂದ ಮಾತ್ರಕ್ಕೇ ಸಂಸ್ಕೃತಪ್ರಿಯರು ಆ ಗ್ರಂಥವನ್ನು ಆದರಿಸುವುದೇ? ವ್ಯಾಸಪೂಜೆಯಂದು ಆ ಗ್ರಂಥವನ್ನು ಪೂಜೆಗೆ ಇಡುವುದೆ?

ಶ್ರೀಪಾದರಾಜರು ಕನ್ನಡದಲ್ಲಿ ತತ್ವಪ್ರಚಾರಕ್ಕೆ ತೊಡಗಲು ಅಪ್ಪ ಹಾಕಿದ ಆಲದಮರಕ್ಕೆ ನೇಣುಹಾಕಿಕೊಳ್ಳುವ ದೃಢತೆಯುಳ್ಳ ಕೆಲಜನ ಶುಂಠರು ಅವರ ಈ ಆಚರಣೆಯನ್ನು ಆಕ್ಷೇಪಿಸತೊಡಗಿದರು. ಹುರುಳಿಲ್ಲದ ಈ ಆಕ್ಷೇಪವನ್ನು ಕೇಳಿಯೂ ಕೇಳಿಸದಂತೆ ಶ್ರೀಪಾದರಾಜರು ತಮ್ಮ ಸದುದ್ದೇಶ ಪೂರಿತವಾದ ಕರ್ತವ್ಯಾಚರಣೆಯಲ್ಲಿ ಹೆಚ್ಚು ಹೆಚ್ಚು ದಕ್ಷತೆಯನ್ನು ವಹಿಸುತ್ತಾ ಬಂದರು. ಆಕ್ಷೇಪಣೆ ಮಾಡುವವರಿಗೆ ಸ್ವೀಕೃತ ಕಾರ್ಯಕ್ಷೇತ್ರದಲ್ಲಿ ಸಫಲತೆಯನ್ನು ಹೊಂದುತ್ತಿರುವ ಶ್ರೀಪಾದರಾಜರ ಸಂಯಮಶಕ್ತಿಯು ತಮ್ಮ ಮೂಗನ್ನು ಕೊಯ್ದಂತೆ ಕಂಡಿತು. ಇನ್ನೇನೂ ಮಾರ್ಗ ಕಾಣದೆ ಶ್ರೀಪಾದರಾಜರಿಗೇ ಈ ಮಡಿವಂತರು ಅದಾವುದೋ ಒಂದು ವಿಧವಾದ ಬಹಿಷ್ಕಾರವನ್ನು ಹಾಕಿದರು. ಆದರೆ ಕಾಲಕ್ಕನುಗುಣವಾಗಿ ನಡೆಯುತ್ತಾ ತಮ್ಮ ಧರ್ಮವನ್ನೂ ರಕ್ಷಿಸಿಕೊಂಡು ಸಜ್ಜನರ ಮೆಚ್ಚುಗೆಗೆ ಪಾತ್ರರಾದ ಶ್ರೀಪಾದರಾಜರಿಗೆ ಇಂಥವರಿಂದ ಏನೂ ತೊಡರನ್ನುಂಟು ಮಾಡಲು ಸಾಧ್ಯವಾಗಲಿಲ್ಲ. ಇಂಥಾ ಕ್ಷುಲ್ಲಕರ ಅಂಜಿಕೆಗೆ ಕೈಕೊಂಡ ಸತ್ಕಾರ್ಯವನ್ನು ಬಿಟ್ಟು ಬಿಟ್ಟ ಅಂಜುಬುರುಕರು ಶ್ರೀಪಾದರಾಜರಾಗಿದ್ದರೆ – ಇಂದು ಅವರ ಚರಿತ್ರೆಯನ್ನು ಬರೆಯುವ ಕೆಲಸವೇ ನಮಗಿರುತ್ತಿರಲಿಲ್ಲ. ಯಾವಕಾಲದಲ್ಲೂ ಚಳುವಳಿಗಾರರಿಗೆ ಎದುರಾಳಿಗಳಿದ್ದೇ ಇರುವರು. ಆತ್ಮತೇಜಸ್ಸುಳ್ಳವರು ಅವರನ್ನು ಲೆಕ್ಕಿಸದೆ ತಾವು ನಿರ್ವಹಿಸಿದ ಕಾರ್ಯದಲ್ಲಿ ಜಯವನ್ನು ಗಳಿಸಿಯೂ ಗಳಿಸುವರು. ಶ್ರೀಪಾದರಾಜರು ಭಾಗವತಧರ್ಮ ಪ್ರಚಾರಕ್ಕಾಗಿ ಅಲ್ಲಲ್ಲಿ ಬೇರೆ ಬೇರೆ ಸಂಘಗಳನ್ನು ಏರ್ಪಡಿಸಿದರು. ಶ್ರೀ ಪಾದರಾಜರ ಸಂದೇಶದ ಸಾರವೇನೆಂದರೆ--

ಉಗಾಭೋಗ

**ಧ್ಯಾನವು ಕೃತಯುಗದಿ ಯಜನವು ತ್ರೇತಾಯುಗದಿ**
**ದಾನವಾಂತಕನ ದೇವತಾರ್ಚನೆಯು ದ್ವಾಪರಯುಗದಿ**

**ಆ ಜನರಿಗೆಷ್ಟು ಫಲವೋ ಆ ಫಲವು ಈ ಕಲಿಯುಗದಿ**
**ಗಾನ ಮಾತ್ರದಿ ಕೇಶವನ ನೆನೆದರೆ ಕೈಗೂಡುವನು ರಂಗವಿಠಲ||**

ಇದು ಅವರ ಸಂದೇಶದ ಸಾರ. ಕಲಿಗಾಲವು ಬಲು ಬಾಧಕವೆಂದು ಹೆದರಬೇಡಿ ಎಂದು ಮತ್ತು ಧೈರ್ಯವನ್ನು ಹೇಳಿದ್ದಾರೆ –

**ಉಗಾಭೋಗ**

ಕಲಿಕಾಲಕೆ–ಸಮಯುಗವಿಲ್ಲವಯ್ಯ
ಕಲುಷ ಹರಿಸಿ ಕೈವಲ್ಯವನೀವುದಯ್ಯ
ಸಲೆನಾಮಕೀರ್ತನೆ ಸ್ಮರಣೆಸಾಕಯ್ಯ
ಸ್ಮರಿಸಲು ಸಾಯುಜ್ಯ ಪದವೀವುದಯ್ಯ
ಬಲವಂತ **ಶ್ರೀ ರಂಗವಿಠಲನ ನೆನೆದರೆ**
**ಕಲಿಯುಗ ಕೃತಯುಗವಾಗುವುದಯ್ಯ** || ೧ ||

ಶ್ರೀಹರಿಯ ಅನುಗ್ರಹದಿಂದ ಲಭ್ಯವಾದ ಸಾಧನ ಶರೀರದ ಮಹತ್ವವನ್ನು ಅರಿಯದೆ ವ್ಯರ್ಥಗೊಳಿಸಬೇಡಿ ಎಂದು ಸುಜನರಲ್ಲಿ ಅನುಕಂಪದಿಂದ—

**ರಾಗ—ನಾದನಾಮಕ್ರಿಯೆ ಆದಿತಾಳ**

ಕುರುಡುನಾಯಿ ಸಂತೆಗೆ ಬಂತಂತೆ ||ಪ ||
ಅದು ಯಾಕೆ ಬಂತಂತೆ || ಅ || ಪ ||
ಖಂಡ ಸಕ್ಕರೆ ಒಲ್ಲದಂತೆ ತುಂಡು ಎಲುಬನು ಕಡಿದೀತಂತೆ
ಹೆಂಡಿರು ಮಕ್ಕಳ ನೆಚ್ಚೀತಂತೆ ಕೊಂಡೊಯ್ವಾಗ ಯಾರಿಲ್ಲಂತೆ || ೧ ||

ನಾನಾಜನ್ಮ ವೆತ್ತೀತಂತೆ ಮಾನವನಾಗಿ ಹುಟ್ಟೀತಂತೆ
ಕಾನನ ಕಾನನ ತಿರುಗೀತಂತೆ ತಾನು ತನ್ನ ಮರೆತೀತಂತೆ || ೨ ||

ಮಂಗನ ಕೈಯ್ಯ ಮಾಣಿಕ್ಯವಂತೆ ಹಾಂಗು ಹೀಂಗೂಕಳೆದೀತಂತೆ
ರಂಗವಿಠಲನ ಮರೆತೀತಂತೆ ಭಂಗ ಬಹಳ ಪಟ್ಟೀತಂತೆ || ೩ ||

ಎಂಬಂತೆ ಆಗಬೇಡಿ ಜನ್ಮಸಾರ್ಥಕ ಮಾಡಿಕೊಳ್ಳಿ ಎಂದು ಸಾರಿರುವರು. ಜನ್ಮಸಾರ್ಥಕವಿಲ್ಲದ ಮಾನವನ ಜನ್ಮ ಕುರುಡು ನಾಯಿ ಸಂತೆಗೆ ಹೊರಟಂತೆ. ಸಂತೆಗೆ ಹೋಗಿ ವ್ಯಾಪಾರ ಮಾಡಿಕೊಂಡು ಮನುಷ್ಯನಂತೆ ಮನೆಗೆ ಮರಳುವುದಕ್ಕೆ ನಾಯಿಗೆ ಸಾಧ್ಯವೆ? ಹಾಗೇ ಪ್ರಪಂಚವೆಂಬ ಸಂತೆಯಲ್ಲಿ ಬಹುಬೆಲೆ ಬಾಳುವ ಪರಮಾರ್ಥ ಸಾಧನ ಸಾಮುಗ್ರಿಗಳನ್ನು ಕೊಂಡುಕೊಳ್ಳದ ಮಾನವನ ಬಾಳು ಶ್ವಾನವದ್ವ್ಯರ್ಥವು ಎಂದು ಶ್ರೀಪಾದರಾಜರ ಅಭಿಪ್ರಾಯವು–ಭಾಗವತಾಚಾರ್ಯರಿಗೆ ಸಮ್ಮತವಾದುದು.

ಶ್ರೀಪಾದರಾಜರು ತಾವು ಸಂಸ್ಥಾನಾಧಿಪತಿಗಳೆಂಬ ಹೆಮ್ಮೆಗೆ ಒಳಗಾಗದೆ ರಾತ್ರಿ ಭಾಗವತರ ಮೇಳದೊಂದಿಗೆ ಹರಿಭಜನೆಯನ್ನು ಮಾಡುತ್ತಾ ದೇವರೆದುರಿನಲ್ಲಿ ಕುಣಿಯುತ್ತಿದ್ದರು. ಶ್ರೀಪಾದರಾಜರು ತೋರಿಕೊಟ್ಟ ಭಜನಾಪದ್ಧತಿಯೇ ಇಂದಿಗೂ ಎಲ್ಲಾ ಸಂಸ್ಥಾನಗಳಲ್ಲೂ ಹೆಸರಿಗಾದರೂ ನಡೆಯುಬರುತ್ತಿದೆ. ಸಂಪ್ರದಾಯವನ್ನು ಬಿಡದೆ ಪಾಲಿಸಿಕೊಂಡು ಬರುತ್ತಿರುವ ಹರಿದಾಸರ ಮನೆಗಳಲ್ಲೂ ಅಪರೂಪವಾಗಿಯಾದರೂ ನಡೆದು ಬರುತ್ತಿದೆ. ಅಂತೂ **ಹರಿಭಜನಾ ಪದ್ಧತಿಗೆ ಕಲಿಯುಗದಲ್ಲಿ ಮೂಲ ಪುರುಷರು ನಮ್ಮ ಶ್ರೀಪಾದರಾಜರು.**

## ಬ್ರಹ್ಮಹತ್ಯಾ ಪರಿಹಾರವು

ಚಂದ್ರಗಿರಿಯನ್ನು ಸಳುವ ನರಸಿಂಹ ರಾಜನು ಆಳುತ್ತಿದ್ದನು. ತಿರುಪತಿಯು ಆ ಕಾಲದಲ್ಲಿ ಚಂದ್ರಗಿರಿಯ ಅರಸರ ಆಡಳಿತದಲ್ಲಿತ್ತು. ತಿರುಪತಿಯ ಅರ್ಚಕರು ಅತ್ಯಾಚಾರಕ್ಕಾರಂಭಿಸಿದರು. ರಾಜನು ಎಷ್ಟು ಎಚ್ಚರಿಸಿದರೂ ಕೇಳಲಿಲ್ಲ. ಭಗವದಪಚಾರವನ್ನು ಮಾಡುತ್ತಿರುವ ಅರ್ಚಕರ ಸಂತತಿಯನ್ನೇ ರಾಜನು ನಿರ್ಮೂಲವಮಾಡಿಸಿದನು. ಅನ್ಯಾಯಕ್ಕೆ ತಕ್ಕ ಶಿಕ್ಷೆಯನ್ನು ರಾಜನು ವಿಧಿಸಿದುದೇನೋ ನಿಜ. ಆದರೆ ಬ್ರಹ್ಮಹತ್ಯೆಯು ರಾಜನನ್ನು ಬಿಡಲಿಲ್ಲ. ಇಂದ್ರನು ವೃತ್ರಾಸುರನನ್ನು ದೇವರ ಆಜ್ಞೆಯಂತೆ ಕೊಂದು ಮಹಾತ್ಮನೆನಿಸಿದರೂ ತನಗೆ ಅವರಿಂದ ಪಾಪಸಂಘಟನೆಯಾಗದಿದ್ದರೂ ಮುಂದೆ ಎಲ್ಲರೂ ಲೋಕದಲ್ಲಿ ಬ್ರಹ್ಮಹತ್ಯಾ ನಡೆಸಿ ಹಾಳಾಗಬಾರ

ದೆಂದು ಪ್ರಾಯಶ್ಚಿತ್ತವನ್ನು ಮಾಡಿಕೊಂಡಿರುವನು. ಅಂದ ಮೇಲೆ ಈ ರಾಜನನ್ನು ಬ್ರಹ್ಮಹತ್ಯೆಯು ಬಿಡುವುದುಂಟೇ! ರಾಜನಿಗೆ ಅನೇಕ ಅನಿಷ್ಟ ಗಳು ತಲೆದೋರಿದುವು. ಅಷ್ಟರಲ್ಲೇ ದೇಶದಲ್ಲೆಲ್ಲ ಶ್ರೀಪಾದರಾಜರ ಮಹಿಮೆಯು ಹರಡಿತ್ತು. ನರಸಿಂಹ ಭೂಪನು ಶ್ರೀಪಾದರಾಜರ ಸನ್ನಿಧಾನಕ್ಕೆ ಬಂದು, ಪಾದಕಮಲಗಳಿಗೆ ದೂರದಿಂದಲೇ ವಂದಿಸಿ, ಕೈಮುಗಿದು ಕೊಂಡು ದೂರದಲ್ಲಿ ನಿಂತು ಉದ್ಧಾರ ಮಾಡಬೇಕೆಂದು ಅಂಗಲಾಚಿ ಬೇಡಿ ಕೊಂಡನು. ರಾಜನು ನಿಜವಾಗಿ ಪಶ್ಚಾತ್ತಪ್ತನಾಗಿರುವನೆಂಬುದನ್ನು ಅರಿತ ಶ್ರೀಪಾದರಾಜರು ಅವನಿಂದ ತಕ್ಕ ಶಾಂತಿ ಕರ್ಮಗಳನ್ನು ಮಾಡಿಸಿ ದಾನ ಧರ್ಮಗಳನ್ನು ಮಾಡಿಸಿ ಬ್ರಹ್ಮಹತ್ಯಾ ದೋಷದಿಂದ ಮುಕ್ತನನ್ನಾಗಿ ಮಾಡಿ ವಸಿಷ್ಟರು ಕಲ್ಮಾಷಪಾದ (ಸೌದಾಸ)ನನ್ನು ಬ್ರಹ್ಮಹತ್ಯಾ ದೋಷ ದಿಂದ ಮುಕ್ತನನ್ನಾಗಿ ಮಾಡಿ ಖ್ಯಾತರಾದಂತೆ ಖ್ಯಾತರಾದರು ಮಾತ್ರವಲ್ಲ- ರಾಜನ ಪ್ರಾರ್ಥನೆಯಂತೆ ಸಿಂಹಾಸನಾರೋಹಣವನ್ನು ಮಾಡಿದರು. ರಾಜನು ಮುತ್ತಿನಕವಚ ತನ್ನ ಕಿರೀಟ ಕರ್ಣಕುಂಡಲಗಳನ್ನು ಅರ್ಪಿಸಿ ತಾನು ದಾಸಾನುದಾಸನಂತೆ ಕೈಜೋಡಿಸಿಕೊಂಡು ನಿಂತನು.

ಜ್ಞಾನಿಗಳಾದಶ್ರೀಪಾದರಾಜರು ಸುಖದು:ಖರೂಪಪ್ರಾರಬ್ಧಭೋಗಾ ನುಭವವು ಅನುಭವಿಸಿಯೇ ಮುಗಿಸಬೇಕಾದುದು ಶ್ರೀಹರಿಯ ಸಂಕಲ್ಪ ವೆಂದರಿತವರಾದುದರಿಂದ ತಮ್ಮ ಜಪತಪಾದಿಗಳಿಗೆ ಆಶ್ರಮಧರ್ಮ ಪಾಲ ನೆಗೆ ಭಂಗವಿಲ್ಲದಂತೆ ಸುಖಪ್ರಾರಬ್ಧವನ್ನನುಭವಿಸಲಾರಂಭಿಸಿದರು.

ಈ ವಿಷಯವನ್ನು ಶ್ರೀ ವ್ಯಾಸರಾಜರು ತಾವು ರಚಿಸಿರುವ ಶ್ರೀಪಾದ ರಾಜಾಷ್ಟಕದಲ್ಲಿ—

"ಶ್ರೀ ಮದ್ವೀರನೃಸಿಹ್ಮರಾಜ ನೃಪತೇರ್ಭೂದೇವಹತ್ಯಾವ್ಯಥಾಂ
ದೂರೀಕೃತ್ಯ ತದರ್ಪಿತೋಜ್ವಲ ಮಹಾಸಿಂಹಾಸನೇ ಸಂಸ್ಥಿತಃ
ಶ್ರೀ ಮತ್ಪೂರ್ವ ಕವಾಟ × ನಾಮಕಪುರೇ ಸರ್ವೇಷ್ಟಸಿದ್ಧಿಪ್ರದಃ
ಶ್ರೀಶ್ರೀಪಾದಯತೀಂದ್ರಶೇಖರಮಣಿಃ ಭೂಯಾತ್ಸನಃಶ್ರೇಯಸೇ ॥"

---

× ಪೂರ್ವಕವಾಟ=ಮೂಲಬಾಗಿಲು. ಈಗ ಮುಳಬಾಗಿಲು ಎಂದು ಕರೆಸಿಕೊಳ್ಳುತ್ತಿದೆ. ಶ್ರೀಪಾದರಾಜರ ಮೂಲಬೃಂದಾವನ ಇಲ್ಲೇ ಇವೆ ಇದು ಕೋಲಾರ್ ಡಿಸ್ಟ್ರಿಕ್ಟಿಗೆ ಸೇರಿದ ಗ್ರಾಮ.

ಎಂಬುದಾಗಿ ಸ್ತುತಿಸಿರುವರು. ಅಲ್ಲದೆ ಮತ್ತೊಂದು ಕಡೆ ಕನ್ನಡ ಪದ್ಯದಲ್ಲಿಯೂ--

**"ಮಹಿಮೆಸಾಲದೇ ಇಷ್ಟು ಮಹಿಮೆಸಾಲದೆ ॥ ಪ ॥**
**ಅಹಿಶಯನನ ಒಲುಮೆಯಿಂದ**
**ಮಹಿಯೊಳಿಮ್ಮ ಶ್ರೀಪಾದರಾಜರ ॥ ಅ ॥ ಪ ॥**
**ಮುತ್ತಿನ ಕವಚ ಮೇಲ್ಕುಲಾವಿ**
**ರತ್ನ ಕೆತ್ತಿದ ಕರ್ಣಕುಂಡಲ**
**ಕಸ್ತೂರಿತಿಲಕ ಗಂಧಲೇಪಿಸಿ**
**ವಿಸ್ತಾರದಿಂದಲಿ ತೋರಿ ಮೆರೆದ"**

ಎಂಬುದಾಗಿ ಶ್ರೀ ವ್ಯಾಸರಾಜರೇ ಕೊಂಡಾಡಿರುವರು.

## ದಿಗ್ವಿಜಯ

ಶ್ರೀಪಾದರಾಜರ ಮೇಲ್ಮೆಯನ್ನು ಸಹಿಸಲಾರದ ಮತ್ಸರಿಗಳಾದ ಪಂಡಿತರನೇಕರು ವಾದಕ್ಕೆ ಬಂದರು. ರಾಜನ ಸಮ್ಮುಖದಲ್ಲೇ ವಾದವಾಗಿ ಶ್ರೀಪಾದರಾಜರು ದಿಗ್ವಿಜಯಶಾಲಿಗಳಾದರು. ಸೋತ ಪಂಡಿತರು ಶ್ರೀಪಾದರಾಜರ ಮೇಲೆ ಮಾರಣ ಪ್ರಯೋಗ † ನಡೆಸಿದರು. ಶ್ರೀಪಾದ ರಾಜರು ಹಯಗ್ರೀವ ಮಂತ್ರ ಪುನಶ್ಚರಣೆಮಾಡಲು ಮಾರಣವು ಪ್ರಯೋ ಗಿಸಿದವರಿಗೇ ಬಡಿಯುವ ಹೊತ್ತುಬರಲು ಬಂದು ಶರಣಾಗತರಾದರು. ಶ್ರೀಪಾದರಾಜರು ಅವರನ್ನು ಸಲಹಿದರು.

ಹೀಗೆ ದೇಶ ದೇಶವನ್ನು ಸಂಚರಿಸುತ್ತಾ, ಭಾಗವತಧರ್ಮ ಪ್ರಚಾರ ಮಾಡುತ್ತಾ, ವಿದ್ಯಾಕೇಂದ್ರಗಳಲ್ಲಿ ದಿಗ್ವಿಜಯ ಮಾಡುತ್ತಾ, ರಾಜರಾಜ ರಿಂದ ಪೂಜಿತರಾಗಿ ಶ್ರೀಪಾದರಾಜರು ಶ್ರೀಮದಾಚಾರ್ಯರನ್ನೂ ಗೋಪೀ ನಾಥನನ್ನೂ ತಮ್ಮ ಅಪಾರ ಸೇವೆಯಿಂದ ಸುಪ್ರೀತರನ್ನಾಗಿ ಮಾಡಿದರು.

---

†ಮಾರಣ ಪ್ರಯೋಗವೆಂದರೆ ಮಾಟಮಾಡುವುದರಲ್ಲಿ ಒಂದು ವಿಧಾನ.

## ರಂಗ ವಿಠ್ಠಲನೊಲುಮೆ

ಭಗವಂತನ ಲೀಲೆ ಅತಿ ವಿಚಿತ್ರವಾದುದು. ಶ್ರೀಪಾದರಾಜರಿಗೆ ಪಾಂಡುರಂಗ ಕ್ಷೇತ್ರಕ್ಕೆ ಬರುವಂತೆಯೂ ಅಲ್ಲಿ ಒಂದು ಪ್ರದೇಶದಲ್ಲಿ ತಾನು ಅದೃಶ್ಯನಾಗಿರುವಂತೆಯೂ, ಭೂಮಿಯನ್ನಗೆದು ತನ್ನ ಅವಿಗ್ರಹರೂಪವನ್ನು ಸ್ವೀಕರಿಸಿ ಪೂಜಿಸುವಂತೆಯೂ ಶ್ರೀ ಹರಿಯು ಸ್ವಪ್ನ ಸೂಚನೆಯನ್ನಿತ್ತನು. ಹರಿಯು ಪ್ರಸನ್ನನಾಗಲು ಹರ್ಷೋದ್ರೇಕದಿಂದ ತನುಪುಳುಕಾಂಕಿತರಾಗಿ, ಅಂದೇ ಕರುಣಾನಿಧಿಯಾದ ಶ್ರೀನಿಕೇತನ, ಶ್ರೀ ರುಕ್ಮಿಣೀಚಿತ್ತಚೋರ, ಪುಂಡರೀಕವರದ ವಿಠ್ಠಲನ ದರ್ಶನಕ್ಕೆ ಹೊರಟರು. ಮಾರ್ಗದಲ್ಲಿ ಶರಣ ಜನಮಂದಾರನೂ, ಶಾಶ್ವತ ಕರುಣಿಯೂ, ಕಮಲಾಕಾಂತನೂ ಆದ ನಿರುಪಮಾನಂದ ಮೂರ್ತಿಯನ್ನು ಹೆಜ್ಜೆ ಹೆಜ್ಜೆಗೂ ಸ್ಮರಿಸುತ್ತ, ಪಂಢರಾಪುರಕ್ಕೆ ಬಂದು ಚಂದ್ರಭಾಗಾಸ್ನಾನವನ್ನು ಮಾಡಿ ವಿಠ್ಠಲ ದರ್ಶನಮಾಡಿ ಶ್ರೀ ಹರಿಯಿಂದ ನಿರ್ದಿಷ್ಟವಾಗಿ ಸೂಚಿತವಾದ ಸ್ಥಳಕ್ಕೆ ಬಂದು, ಶಿಷ್ಯರಿಂದ ಭೂಮಿಯನ್ನಗೆಸಲು ಎರಡು ಸಂಪುಟಗಳನ್ನು ಕಂಡರು. ಒಂದರ ಮುಚ್ಚಳವನ್ನು ತೆಗೆಯಲು **ಶ್ರೀರಂಗ ವಿಠ್ಠಲನ** ಪರಮಮಂಗಳ ಶಿಲಾಮೂರ್ತಿಯು ಕಂಗಳಿಗೆ ಗೋಚರವಾಗಲು ರೋಮಾಂಚವನ್ನು ಹೊಂದಿ ಆನಂದಾಶ್ರುಗಳನ್ನು ಸುರಿಸುತ್ತಾ ಬಹಿಃಪ್ರಪಂಚವನ್ನು ಮರೆತು ಮನದಣಿಯೆ ಮೂರ್ತಿಯನ್ನು ಕೊಂಡಾಡಿದರು. ಪರಮಭಕ್ತಿಯಿಂದ ಪೂಜಿಸಿದರು. ಮತ್ತೊಂದು ಸಂಪುಟದ ಮುಚ್ಚಳವನ್ನು ತೆರೆಯಲು ಬರಲಿಲ್ಲ.+ ಪುನಃ ತೆಗೆಯುವ ಪ್ರಯತ್ನ ಮಾಡದೆ ಆ ಸಂಪುಟಕ್ಕೆ ಪೂಜಿಸಿದರು. **ಶ್ರೀಪಾದರಾಜರಿಗೆ ಪ್ರಸನ್ನನಾಗಿ ಒಲಿದು ಬಂದ ಶ್ರೀರಂಗ ವಿಠಲ ಮೂರ್ತಿಯು ಈಗಲೂ ಶ್ರೀಪಾದರಾಜರ ಮಠದಲ್ಲಿ ಈ ಸಂಸ್ಥಾನಾಧಿಪತಿಗಳ ಕರಕಮಲಗಳಿಂದ ಪೂಜಿಸಿಕೊಳ್ಳುತ್ತಿರುವನು.**

## ದೀನರಲ್ಲಿ ಅನುಕಂಪವು

ಯಾತ್ರೆ ಮುಗಿಸಿ ಬಂದ ಶ್ರೀಪಾದರಾಜರನ್ನು ಊರಿನವರು ವೈಭವದಿಂದಿದಿರ್ಗೊಂಡು ಕರೆತಂದರು. "ಮಹಾನುಭಾವರಾದ ತಮ್ಮ ದರ್ಶನ

---

+ ಈ ಸಂಪುಟದ ವಿಚಾರವು ಮುಂದೆ ನಮ್ಮ ಮಾಲೆಯಿಂದ ಪ್ರಕಟವಾಗಲಿರುವ **"ಭಕ್ತ ವ್ಯಾಸರಾಜರು"** ಎಂಬ ಮೊಗ್ಗೆಯಲ್ಲಿ ವಿಸ್ತಾರವಾಗಿ ಕೊಡಲಿದೆ.

ದಿಂದ ನಾವೂ ಕೃತಾರ್ಥರಾದೆವು—ಆದರೆ ನಮಗೂ ಗಂಗಾಸ್ನಾನ ಮಾಡ ಬೇಕೆಂಬ ಇಚ್ಛೆಯಿದೆ, ಆದರೆ ಕಾವೇರಿಯೂ ಅತಿ ಸಮೀಪದಲ್ಲಿದ್ದರೂ ಅನು ಕೂಲ-ಶಕ್ತಿಗಳಿಲ್ಲದ ನಮ್ಮಂಥವರಿಗೆ ಗಂಗಾಸ್ನಾನ ಮಾಡಿ ಬಂದವರನ್ನು ದರ್ಶನಮಾಡಿಯಾದರೂ ಧನ್ಯರಾಗೋಣ ಎಂದರೆ ಅಷ್ಟು ಯೋಗ್ಯತೆಯೂ ನಮ್ಮಲ್ಲಿಲ್ಲ." ಎಂದು ಕೆಲವರು ಅತಿದೈನ್ಯದಿಂದ ಹಲುಬುತ್ತಿರಲು 'ಇಷ್ಟುಜನ ರನ್ನೂ ಕಾಶಿಗೆ ಕಳುಹಿಸುವುದು ಬಹು ಶ್ರಮಸಾಧ್ಯವು. ಹಾಗೆಂದು ಇವರ ಅಭಿಲಾಷೆಯನ್ನು ಸಲಿಸದೆ ಮನಸ್ಸಿಗೆ ತೃಪ್ತಿಯಿಲ್ಲ. ಇದಕ್ಕೆ ಮಾರ್ಗವಾವುದು' ಎಂಬುದಾಗಿ ಯೋಚಿಸಿ ಶ್ರೀರಂಗವಿಠಲ ದೇವರ ಪಾದಸ್ಮರಣೆ ಮಾಡಿ 'ನಾಳೆ ನೀವಿದ್ದಲ್ಲಿಗೇ ಭಾಗೀರಥಿ ಬರುವಳು. ಕಾಶಿಗೆ ಹೋಗಬೇಕಾದು ದಿಲ್ಲ; ನರಸಿಂಹ ತೀರ್ಥದಲ್ಲಿಯೇ ಗಂಗಾಸ್ನಾನವಾಗುವುದು' ಎಂದು ಅಭಯವಿತ್ತರು.

ಮಾರನೇ ದಿನ ಶ್ರೀಪಾದರಾಜರ ಮಾತಿನಲ್ಲಿ ವಿಶ್ವಾಸ ಉಳ್ಳವರು ಮಂಗಳ ದ್ರವ್ಯ ಸಹಿತ ಪೂಜೋಪಕರಣಗಳೊಂದಿಗೆ ಗಂಗಾಪೂಜೆಯನ್ನು ಮಾಡಲು ಸಿದ್ಧರಾದರು. ತಾವು ಮನಸಾ ಭಾಗೀರಥೀ ದೇವಿಯನ್ನು ಸ್ಮರಿಸಿ ಎಲ್ಲರಿಗೂ ಸ್ಮರಿಸ ಹೇಳಿದರು. ಸ್ವಲ್ಪಹೊತ್ತಿನೊಳಗಾಗಿ ನರಸಿಂಹ ತೀರ್ಥದ ಈಶಾನ್ಯ ದಿಕ್ಕಿನಿಂದ ಶ್ವೇತ ವರ್ಣ ಜಲವು ಬುಳಬುಳನೆ ಉಕ್ಕ ಲಾರಂಭಿಸಿತು. ಶ್ರೀಪಾದರಾಜರು ತ್ರಿಪಥಗಾಮಿನಿಯನ್ನು ಮಂಗಳ ದ್ರವ್ಯಗಳಿಂದ ಅರ್ಚಿಸಿ ಸ್ನಾನಮಾಡಿ ಶ್ರೀ ಗೋಪೀನಾಥನಿಗೂ, ಶ್ರೀ ರಂಗ ವಿಠಲ ಮೂರ್ತಿಗೂ ಅಭಿಷೇಕ ಮಾಡಿದರು. ಶ್ರೀಗಳವರ ಆಜ್ಞಾನುಸಾರ ಎಲ್ಲರೂ ಗಂಗಾಸ್ನಾನ ಮಾಡಿ ಶಕ್ತ್ಯನುಸಾರ ಬ್ರಾಹ್ಮಣ ಸುವಾಸಿನಿಯ ರನ್ನು ದಾನ ಧರ್ಮಾದಿಗಳಿಂದ ತೃಪ್ತಿಪಡಿಸಿದರು. ಶ್ರೀಪಾದರಾಜರ ಮಹಿಮೆಯನ್ನು ಕೊಂಡಾಡಿ ತಾವು ಕೃತಾರ್ಥರಾದೆವೆಂದರು.

ಇಂದಿಗೂ ಮುಳಬಾಗಿಲಲ್ಲಿರುವ ನರಸಿಂಹ ತೀರ್ಥದ ಈಶಾನ್ಯ ಮೂಲೆಯಲ್ಲಿ ಸ್ನಾನಮಾಡಿ ಗಂಗಾಸ್ನಾನ ಫಲಭಾಗಿಗಳಾದೆವೆಂದು ತಿಳಿ ಯುವ ಭಾವುಕರಿದ್ದಾರೆ.

## ಬ್ರಹ್ಮಹತ್ಯಾ ದೋಷವನ್ನು ಪರಿಹರಿಸಿದರು

ಬ್ರಾಹ್ಮಣನೊಬ್ಬನು ಅಕಸ್ಮಾತ್ ತನಗೆ ಬ್ರಹ್ಮಹತ್ಯಾದೋಷವು ಸಂಘಟಿಸಲು ಶ್ರೀಪಾದರಾಜರಲ್ಲಿ ಬಂದು ಪರಿಹರಿಸಬೇಕೆಂದು ಪ್ರಾರ್ಥಿಸಲು ದೇವರಲ್ಲಿ ಕ್ಷಮಾಯಾಚನೆಯನ್ನು ಮಾಡುವಂತೆ ಹೇಳಿ-ಮಾಡಿಸಿ ಶಂಖೋದಕವನ್ನು ಪ್ರೋಕ್ಷಿಸಿ ಪಾಪಪರಿಹಾರವಾಯ್ತು ಹೋಗೆಂದು ಕಳಿಸಿದರು. ಇಷ್ಟುಮಾತ್ರದಿಂದ ಬ್ರಹ್ಮಹತ್ಯಾ ಪರಿಹಾರವಾಗುವುದಾದರೆ ಧರ್ಮಶಾಸ್ತ್ರವೇಕೆ? ಪ್ರಾಯಶ್ಚಿತ್ತ ಕಾಂಡಗಳೇಕೆ? ಇಂಥವರಿಂದ ಬ್ರಹ್ಮಹತ್ಯಾ ಪರಿಹಾರವಾಗುವುದಿರಲಿ ಇವರ ಧೋರಣೆಯಿಂದ ಬ್ರಹ್ಮಹತ್ಯೆಗೆ ಪ್ರೋತ್ಸಾಹವನ್ನು ಕೊಟ್ಟಂತಾಯ್ತೆಂದು ಕೆಲವರು ಎದುರೆದುರೇ ನಿಂದಿಸತೊಡಗಲು ಶ್ರೀಪಾದರಾಜರು ಅವರನ್ನು ಕರೆಸಿ ಎರಡು ಶುಭ್ರವಸ್ತ್ರಗಳನ್ನು ತರಿಸಿ ಎರಡನ್ನೂ ಗೇರೆಣ್ಣೆಯಲ್ಲಿ ಅದ್ದಿ (ಮುಳುಗಿಸಿ) ಒಂದನ್ನು ಶುಭ್ರಮಾಡಿ ತನ್ನಿರೆಂದು ನಿಂದಕರ ಕೈಯ್ಯಲ್ಲಿ ಕೊಟ್ಟರು. ಶ್ರೀಪಾದರಾಜರಿಗಾಗದವರ ಸಕಲ ಯತ್ನಗಳೂ ವಿಫಲವಾದುವು. ಗೇರೆಣ್ಣೆಯು ಕಲೆಹೋಗಲಿಲ್ಲ. ಅವರೆದುರಿಗೇ ಶ್ರೀಪಾದರಾಜರು ಗೇರೆಣ್ಣೆಯಲ್ಲಿ ತೋಯಿಸಿದ ಇನ್ನೊಂದು ವಸ್ತ್ರವನ್ನು ಶಂಖೋದಕ ಪ್ರೋಕ್ಷಣ ಮಾತ್ರದಿಂದ ಶುಭ್ರವಸನವನ್ನಾಗಿ ಮಾಡಿದರು. ಶ್ರೀಪಾದರಾಜರು ಇದು ತಮ್ಮ ಮಹಿಮೆಯೆಂದು ತಿಳಿಯಬೇಡಿ ಮಂತ್ರೋಚ್ಚಾರಣ ಪೂರ್ವಕ ಶಂಖೋದಕ ಪ್ರೋಕ್ಷಣೆಯಿಂದ ಆದುದು ಎಂದರು. ಆದರೆ ಮಂತ್ರಗಳಿಗೆ ಶಕ್ತಿಯಿದ್ದರೂ ಶಂಖೋದಕಕ್ಕೆ ಶಕ್ತಿಯಿದ್ದರೂ ತೇಜಸ್ವಿಗಳ ಮುಖದಿಂದ ಆ ಮಂತ್ರಗಳು ಉಚ್ಚರಿಸಲ್ಪಟ್ಟು ಶಂಖೋದಕ ಪ್ರೋಕ್ಷಣವಾದಾಗ ಮಾತ್ರ ಹೀಗಾಗಲು ಸಾಧ್ಯವೆಂಬುದನ್ನು ಸಜ್ಜನರು ತಿಳಿದಿರುವರು. ಇದು ಶ್ರೀಪಾದರಾಜರ ಮಹಿಮೆಯೆಂದೇ ಅವರು ಸ್ಥಾಪಿಸಿದರು. ಶ್ರೀ ಮದ್ವ್ಯಾಸರಾಜರು ಈ ಮಹಿಮೆಯನ್ನು—

**"ಮಹಿಮೆ ಸಾಲದೆ ಇಷ್ಟು ಮಹಿಮೆ ಸಾಲದೆ ॥ ಪ ॥**
**ಅಹಿಶಯನನ ಒಲುಮೆಯಿಂದ**
ಮಹಿಯೊಳೆಮ್ಮ ಶ್ರೀಪಾದರಾಜರ ॥ ಅ ॥ ಪ ॥
ವಿಪ್ರಹತ್ಯಾ ದೋಷ ಬರಲು

ಕ್ಷಿಪ್ರದಿ ಶಂಖೋದಕದಿ ಕಳೆಯೆ || ‡
ಅಪ್ರಬುದ್ಧರು ದೂಷಿಸೆ ಗೇರೆಣ್ಣೆ
ಕಪ್ಪು ವಸನ ಬಿಳಿದು ಮಾಡಿದ || ೨ ||"

ಈ ಪ್ರಕಾರ ನಿರೂಪಿಸಿರುವರು.

## ಪ್ರಾರಬ್ಧ

ಪ್ರಾರಬ್ಧವೆಂದೊಡನೆ ಕೆಟ್ಟದು ಎಂದೇ ಹೆಚ್ಚಿನವರಿಗೆ ಕಾಣುವುದು. ಸುಖಾನುಭವವೂ ದುಃಖಾನುಭವವೂ ಎರಡೂ ಪ್ರಾರಬ್ಧಾನುಭವಗಳೇ. ಸುಖದುಃಖಮಿಶ್ರಾನುಭವವೂ ಪ್ರಾರಬ್ಧಾನುಭವವೇ. ಬ್ರಹ್ಮಾದಿ ಉತ್ತಮ (ಋಜು) ಜೀವಿಗಳಿಗೆ ಸದಾ ಸುಖಪ್ರಾರಬ್ಧದ ಅನುಭವವು ತಪ್ಪಿದುದಲ್ಲ. ಕಲ್ಯಾದಿ ದೈತ್ಯ ಜೀವರಿಗೆ ಸದಾ ದುಃಖ ಪ್ರಾರಬ್ಧಾನುಭವವು (ಮಹಾ ದೈತ್ಯರಿಗೆ) ತಪ್ಪಿದುದಲ್ಲ.

'ಪ್ರಾರಬ್ಧ ಕರ್ಮಣೋನ್ಯಸ್ಯ ಭೋಗಾದೇವ ಪರಿಕ್ಷಯಃ ||'

ಅಂತೂ ಪ್ರಾರಬ್ಧವು ಅನುಭವದಿಂದಲೇ ಸವೆಯಬೇಕಾದುದು ಎಂಬುದು ಶಾಸ್ತ್ರಸಿದ್ಧವಾದ ವಿಷಯ.

ಶ್ರೀಪಾದರಾಜರು ತಮಗೆ ಸುಖಪ್ರಾರಬ್ಧದ ಅನುಭವವೆಂಬುದನ್ನು ಅರಿತವರಾದುದರಿಂದ ಪ್ರತಿನಿತ್ಯವೂ ಅರವತ್ತು ಬಗೆಯ ಶಾಖಪಾಕ ಭಕ್ಷ್ಯ ಭೋಜ್ಯಗಳನ್ನು ದೇವರಿಗೆ ಅರ್ಪಿಸಿ ಸ್ವೀಕರಿಸುತ್ತಾ, ನಿತ್ಯವೂ ಸುಗಂಧ ಮಿಶ್ರಿತ ತೈಲದಲ್ಲೇ ಅಭ್ಯಂಜನ ಮಾಡಿಕೊಳ್ಳುತ್ತಾ, ಹಂಸತೂಲಿಕಾತಲ್ಪ ದೋಪಾದಿಯಲ್ಲಿರುವ ಶಯ್ಯೆಯಲ್ಲಿ ಶಯನಮಾಡುತ್ತಿದ್ದರು. ರತ್ನಕೆತ್ತಿದ ಕಿರೀಟ-ಸುವರ್ಣ ಕರ್ಣ ಕುಂಡಲಗಳ ಧಾರಣ, ಸಿಂಹಾಸನಾರೋಹಣವೇ ಮೊದಲಾದ ರಾಜ ಭೋಗಗಳನ್ನು ಅನುಭವಿಸುತ್ತಿದ್ದರು.

ಸಾಮಾನ್ಯರು-ಗೃಹಸ್ಥರು ಹೀಗೆ ಸುಖಸಾಮಗ್ರಿಗಳಿಂದ ಕೂಡಿ ಸುಖಿಸುತ್ತಿದ್ದರೇನೇ ಆಗದವರು ನಾನಾಪ್ರಕಾರ ಬಾಯಿ ಹರಿಬಿಟ್ಟು ಆಡಿಕೊಳ್ಳುವರು. ಅಂದ ಮೇಲೆ ಯತಿಗಳು ಹೀಗಿದ್ದರೆ ಬಿಡುವರೇ! ಕೆಲವರು

‡ (ಕ್ಷಿಪ್ರದಿಶಂಖೋದಕವತಳೆಯು) । ಪಾಠಾಂತರ.

ಕುಹಕರು ಒಬ್ಬ ತುಂಡರಸನಿಗೆ ದುರ್ಬೋಧನೆಯಿತ್ತು ಶ್ರೀಪಾದರಾಜರ ಪರೀಕ್ಷೆಗೆ ಕಳಿಸಿದರು. ರಾಜನು ಶ್ರೀಪಾದರಾಜರ ಬಳಿಗೆ ಬಂದು 'ಈ ದಿವಸ ತಮಗೆ ಒಂದು ಸುಂದರ ಪ್ರದೇಶದಲ್ಲಿ ದೇವರ ಪೂಜೆಗೂ ಭಿಕ್ಷೆಗೂ ಸಕಲ ಸಾಮಗ್ರಿಗಳೊಂದಿಗೆ ಸಿದ್ಧಪಡಿಸಿರುವೆನು' ಎಂದು, ತನ್ನ ಸೇವಕರನ್ನು ಜೊತೆಗೊಳಿಸಿ ಶ್ರೀಪಾದರಾಜರನ್ನು ಒಂದಡವಿಯ ಮಧ್ಯದಲ್ಲಿ ಕರೆದೊಯ್ದು ಬಿಟ್ಟುಬರುವಂತೆ ಏರ್ಪಡಿಸಿದನು. ಶ್ರೀಪಾದರಾಜರು ಒಂದು ಹಾಳು ಮಂಟಪದಲ್ಲಿ ರಾಜದೂತರು ತೋರಿಸಿಕೊಟ್ಟ ಸ್ಥಳದಲ್ಲಿ ಬಂದು ಶಿಷ್ಯ ರೊಂದಿಗೆ ದೇವರ ಪೆಟ್ಟಿಗೆ ಇಟ್ಟುಕೊಂಡು ಕುಳಿತರು. ರಾಜದೂತರು ಈಗ ಬರುತ್ತೇವೆಂದು ಹೇಳಿ ಮನೆಯ ದಾರಿ ಹಿಡಿದರು. ಬಹಳ ಹೊತ್ತಾ ದರೂ ಯಾರೂ ಇಲ್ಲ. ದಟ್ಟಡವಿಯೇ ಅಡವಿ! ಹಾಳುಮಂಟಪವೇ ಮಂಟಪ! ಕರೆದರೆ ಓ ಅನ್ನುವವರಿಲ್ಲ 'ಭೋ' ಗುಟ್ಟುತ್ತಿತ್ತು ಕಾಡು. ಸ್ವಾಮಿಗಳು ಪ್ರಾತರಾಹ್ನೀಕವನ್ನು ತೀರಿಸಿ ಭಗವದಿಚ್ಛೆಯಿದ್ದಂತಾಗಲಿ ಎಂದು ರಂಗವಿಠ್ಠ ಲನನ್ನು ಸ್ಮರಿಸುತ್ತ ಕುಳಿತರು. ಶಿಷ್ಯರು ಅಲ್ಲಿ ಇಲ್ಲಿ ಸುತ್ತಿಬಂದು ಯಾರ ಸುಳಿವೂ ಕಾಣದೆ 'ಕರೆತಂದವರ ಸುದ್ದಿಯೇ ಇಲ್ಲ—ಯಾವಸಿದ್ಧತೆಯೂ ಇಲ್ಲ ಈ ದಿನ ಶ್ರೀಗೋಪೀನಾಥ ರಂಗವಿಠ್ಠಲರಿಗೂ ಉಪವಾಸ ವ್ರತವೆಂದು ತೋರುತ್ತೆ' ಎಂದರು. ಶ್ರೀಪಾದರಾಜರು ನಗುತ್ತಾ

**ರಾಗ—ಸಾವೇರಿ ಅಟತಾಳ**

ಇಟ್ಹ್ಯಾಂಗೆ ಇರುವೆನೋ ಹರಿಯೇ ಎನ್ನ ಧೊರೆಯೇ || ಪ ||
ಶ್ರೇಷ್ಠ ಪಾದಪದ್ಮಯುಗಳ ಶ್ರೀ ಹರಿಯೇ || ಅ || ಪ ||
ಸಣ್ಣ ಶಾಲ್ಯೋದನ್ನ ಬೆಣ್ಣೆಕಾಸಿದ ತುಪ್ಪ
ಚಿನ್ನದ ಹರಿವಾಣದಲಿ ಭೋಜನ ||
ಘನ್ನ ಮಹಿಮೆ ನಿನ್ನ ಕರುಣ ತಪ್ಪಿದರೆ
ಕ-ದನ್ನಕ್ಕೆ ಬಾಯ ಬಿಡಿಸುವ್ಯಲ್ಲೋ ಹರಿಯೇ || ೧ ||
ಪೆಂಪಿಲಿ ಪೊಳೆವ ಪೀತಾಂಬರ ಉಡಿಸುವಿ
ಸೊಂಪಿನಂಚಿನ ಶಾಲು ಹೊದಿಸುವಿಯೋ ||
ಕಂಪಿಲ × ಹರಿ ನಿನ್ನ ಕರುಣ ತಪ್ಪಿದ ಮೇಲೆ
ಕೌಪೀನ ದೊರೆಯದು ಪಿನಾಕಿವಂದ್ಯ || ೨ ||

× ಕಪಿಲ.

ಚಂದ್ರಕಾಂತಿ ಚಂದ್ರಕಿರಣದಂತೊಪ್ಪುವ
ಚಂದಾದ ಮಂಚದೋಳ್ ಮಲಗಿಸುವಿ ||
ಮಂದರೋದ್ಧರ ನಿನ್ನ ಮಮತೆ ತಪ್ಪಿದರೆ ಧರ್ಮ-
ಮಂದಿರದಲಿ ತೋಳ್ ತಲೆಗಿಂಬು ಮಾಡಿಸುವಿ || ೩ ||

ನರಯಾನದೊಳು ಕ್ಷಣ ನರವರನೆನಿಸುವಿ
ವರ ಛತ್ರ ಚಾಮರ ಹಾಕಿಸುವಿ ||
ಕರುಣಾನಿಧೇ ನಿನ್ನ ಕರುಣ ತಪ್ಪಿದ ಮೇಲೆ
ಚರಣಾಭರಣ ಪಾದರಕ್ಷೆ ದೊರೆಯದೋ || ೪ ||

ಗಂಗಾಜನಕ ಪಾಡುರಂಗ ನಿನ್ನ ಭಕ್ತರ
ಸಂಗವಿರಲಿ ದುಷ್ಟ ಸಂಗಬೇಡ ||
ಅಂಗನೆಯರ ಕೂಡ್ಯಾನಂಗ ಬಾಣಕೆ ಸಿಲುಕಿ
ಭಂಗ ಪಡಲಾರೆ ಶ್ರೀ ರಂಗ ವಿಠಲ ದೊರೆಯೋ || ೫ ||

ಎಂಬುದಾಗಿ ಹಾಡಿ, "ಶ್ರೀಹರೇ ನಿನ್ನ ಚಿತ್ತ! ನೀನಿಟ್ಟಂತೆ ಇರುವೆನು! ನಿನ್ನ ಚಿತ್ತಕ್ಕೆ ಬಂದುದೇ ಮಹಾಭಾಗ್ಯ! ಈಶ್ವರನ ಸಂಕಲ್ಪ ಸತ್ಯ ಸಂಕಲ್ಪ" ಎಂದು ತಮ್ಮ ಯೋಗಕ್ಷೇಮದ ಭಾರವನ್ನು ಶ್ರೀಹರಿಗೇ ಒಪ್ಪಿಸಿದವರಾದುದರಿಂದ ಭಗವತ್ಸ್ಮರಣೆ ಮಾಡುತ್ತಾ ಇರಲು-ಭಗವಂತನು ಭಜಕರ ಕೈಬಿಡುವನೇ? ಒಬ್ಬ ವ್ಯಾಪಾರಿಯ ವೇಷಧಾರಣ ಮಾಡಿ ಪರಮಾತ್ಮನೇ ಸಕಲ ಸಾಮಾನುಗಳನ್ನು ಹೇರಿಸಿಕೊಂಡು ಬಂದು ಈ ದಿವಸದ ಸೇವೆ ತನ್ನದೆಂದು ನಮಸ್ಕರಿಸಿ ಕೇಳಿಕೊಂಡನು. ಸ್ವಾಮಿಗಳು ಸಮ್ಮತಿಯನ್ನಿತ್ತರು. ಎಂದಿನಂತೆ ಶ್ರೀಪಾದರಾಜರಿಗೆ ಅಭ್ಯಂಜನವಾಯ್ತು. ಎಂದಿನಗಿಂತಲೂ ವಿಶೇಷ ಭಕ್ಷ್ಯಭೋಜ್ಯಾದಿಗಳೊಂದಿಗೆ ಪಾಕಸಿದ್ಧವಾಯ್ತು. ದೇವರ ಪೂಜಾ ಮಾಡಿ ಭಿಕ್ಷಾ ಸ್ವೀಕಾರ ಮಾಡಿದರು. ಪದಾರ್ಥ ತಂದು ಭಿಕ್ಷೆಗೆ ಅನುವು ಮಾಡಿಕೊಟ್ಟವರಿಗೂ ತೀರ್ಥ—ಪ್ರಸಾದ ಕೊಡಿಸಿ ಭೋಜನವನ್ನು ಹಾಕಿಸಿದರು. ಈ ವ್ಯಾಪಾರಿಗೆ ನೈವೇದ್ಯ ಕಾಲದಲ್ಲೊಮ್ಮೆ ಈಗೊಮ್ಮೆ ಎರಡು ಬಾರಿ ಭೋಜನವಾಯ್ತು. ಭಕ್ತರಿತ್ತ ಕಾಣಿಕೆಯನ್ನು

ಎಷ್ಟು ಬಾರಿ ಸ್ವೀಕರಿಸಿದರೂ ಭಗವಂತನಿಗೆ ಸಾಕೆನಿಸದು. ಶ್ರೀಪಾದರಾಜರು ಕೃತ್ರಿಮ ವ್ಯಾಪಾರಿಯನ್ನು ಕುರಿತು 'ಅಪ್ಪಾ ನಿನ್ನಿಂದ ಈ ದಿವಸ ವಿಶೇಷ ರೀತಿಯಿಂದ ದೇವರ ಸೇವೆ ನಡೆಯಿತು. ದೇವರು ಪ್ರೀತನಾದ' ಎಂದರು. ವ್ಯಾಪಾರಿಯು 'ಸ್ವಾಮಿ! ನಾನು ತಿರುಪತಿಗೆ ಮುಡಿಪು ಸಲ್ಲಿಸಲು ಹೊರಟವನು ನಿನ್ನೆ ರಾತ್ರೆ ತನಗೆ ಸಲ್ಲಿಸಬೇಕಾದುದನ್ನು ನಿಮಗೆ ಸಲ್ಲಿಸಿ ಭಿಕ್ಷೆ ಮಾಡಿಸಿದರೆ ತನಗೆ ಸಲ್ಲಿಸಿದಂತೆ ಎಂದು ಸ್ವಪ್ನದಲ್ಲಿ ಶ್ರೀನಿವಾಸನು ಸೂಚಿಸಿ ನಿಮ್ಮ ಇರವನ್ನು ಸೂಚಿಸಿದನು. ಕಾಣಿಕೆಯೇನೋ ಸಿದ್ಧವಾಗಿತ್ತು. ಆದರೆ ಮಧ್ಯ ಮಾರ್ಗದಲ್ಲಿ ಹಾಲು—ಮೊಸರು—ಬೆಣ್ಣೆಗಳನ್ನು ಸಂಗ್ರಹಿಸಲು ಸ್ವಲ್ಪ ತಡವಾಯ್ತು ಮನ್ನಿಸಬೇಕು' ಎಂದನು. ಶ್ರೀಪಾದರಾಜರು ವರ್ತಕನಿಗೆ ಮಂತ್ರಾಕ್ಷತೆಯನ್ನು ಕೊಟ್ಟು ಕಳುಹಿಸಿದರು.

ಶ್ರೀ ಹರಿಯ ಕೃಪೆಯನ್ನು ಚಿಂತಿಸುತ್ತಾ ಶ್ರೀ ಹರಿಯನ್ನೇ ಧ್ಯಾನಿಸುತ್ತಿರಲು ಶ್ರೀಪಾದರಾಜರಿಗೆ ಬಂದು ಹೋದ ವ್ಯಾಪಾರಿಯು ಶ್ರೀನಿವಾಸನೇ ಎಂಬುದು ಅವನ ಅನುಗ್ರಹದಿಂದಲೇ ತಿಳಿದು ಬಂದು ಅಮಿತ ಆನಂದವಾಗಿ ಹರಿಲೀಲೆಗಳನ್ನು ಚಿಂತಿಸುತ್ತಾ ಆನಂದ ಪರವಶರಾದರು.

ಇತ್ತ ಪರೀಕ್ಷೆಗೆ ಹೊರಟ ತುಂಡರಸನ ಏಕಮಾತ್ರ ಪುತ್ರನು ಇದ್ದಕ್ಕಿದ್ದಂತೆ ವಿಷಮಜ್ವರದಿಂದ ಪೀಡಿತನಾಗಲು ಅರಸನು ದೊಡ್ಡವರನ್ನು ಕೆಣಕಿದ ಫಲವೆಂದು ತಿಳಿದು ಶ್ರೀಪಾದರಾಜರ ಬಳಿಗೆ ಬಂದು ಕ್ಷಮಾಯಾಚನೆ ಮಾಡಿ ಪುತ್ರಭಿಕ್ಷೆಯನ್ನು ನೀಡಬೇಕೆನ್ನಲು ಶರಣೆಂದೊಡನೆ ಮನ್ನಿಸುವುದು ಹಿರಿಯರ ಹಿರಿತನದ ಹಿರಿಕುರುಹು. ಆದುದರಿಂದ ಶ್ರೀಪಾದರಾಜರು ಕ್ಷಮಿಸಿದರು. ಅರಸನ ಮಗ ಮೃತ್ಯುಶಯ್ಯೆಯಲ್ಲಿದ್ದವನು ಬದುಕಿದನು.

ಅಂತೂ ಶ್ರೀಪಾದರಾಜರ ಸುಖಪ್ರಾರಬ್ಧವನ್ನು ಯಾರಿಂದಲೂ ತಪ್ಪಿಸಲಾಗಲಿಲ್ಲ. ಶ್ರೀಪಾದರಾಜರ ಸುಖಪ್ರಾರಬ್ಧ ವಿಷಯವನ್ನು ವ್ಯಾಸರಾಜರು ಶ್ರೀಪಾದರಾಜಾಷ್ಟಕದಲ್ಲಿ

'ಭುಂಜಾನಂ ಷಷ್ಠಿಶಾಖಂ ಹಯಗಜಶಿಬಿಕಾ
ನರ್ಘ್ಯಶಯ್ಯಾ ರಥಾಢ್ಯಂ |

ವಂದೇ ಶ್ರೀಪಾದರಾಜಂ ತ್ರಿಭುವನ ವಿದಿತಂ
ಘೋರದಾರಿದ್ರ್ಯ ಶಾಂತ್ಯೈ ||'

ಎಂಬುದಾಗಿಯೂ ಮೇಲ್ಕಂಡ ಮಹಿಮೆಯನ್ನು "ಮಹಿಮೆ ಸಾಲದೆ" § ಎಂಬ ಶ್ರೀಪಾದರಾಜರ ಸ್ತೋತ್ರರೂಪ ಪದ್ಯದಲ್ಲಿಯೂ

'ಹರಿಗೆ ಸಮರ್ಪಿಸಿದ ನಾನಾ
ಪರಿಯ ಶಾಖ ಪಾಕಂಗಳನು

ನರರುನಗಲು ಭುಂಜಿಸಿ ಕೃಷ್ಣನ
ಕರುಣದಿಂದ ಮೆರೆದು ತೋರಿದ'

("ಕರುಣದಿಂದ ಹಸಿದು ತೋರಿದ" ಎಂಬ ಪಾಠಾಂತರವೂ‡ ಇದೆ.) ಎಂದು ಹಾಡಿರುವರು.

## ಶ್ರೀಪಾದರಾಜರ ಕನ್ನಡಕೃತಿಗಳು ಮತ್ತಿತರ ಗ್ರಂಥಗಳು

ಶ್ರೀಪಾದರಾಜರು ಸಂಸ್ಕೃತದಲ್ಲಿ ಅನೇಕ ಗ್ರಂಥಗಳನ್ನು ರಚಿಸಿರುವರು. ಅವುಗಳಲ್ಲಿ '**ವಾಗ್ವಜ್ರ**'ವೆಂಬುದೇ ಇವರಿಂದ ರಚಿತವಾದ ಮಹೀಯಗ್ರಂಥಗಳಲ್ಲಿ ಅತ್ಯುತ್ಕೃಷ್ಟವಾದುದು. ಆದರೆ ಶ್ರೀ ವ್ಯಾಸರಾಜರು ವಿದ್ಯಾಶಿಷ್ಯರಾಗಿ-(ಅಂದರೆ ಶಿಷ್ಯರಲ್ಲವೆಂದಲ್ಲ. ವ್ಯಾಸರಾಜರಿಗೆ ಆಶ್ರಮವಿತ್ತಗುರುಗಳು ಶ್ರೀ ಬ್ರಹ್ಮಣ್ಯತೀರ್ಥರೆಂಬುವ ಯಮಿವರರು. ಆದುದರಿಂದ ಹೀಗೆ ಹೇಳಬೇಕಾಯ್ತು.) ವ್ಯಾಸರಾಯರಂಥ ಶಿಷ್ಯರತ್ನ ಲಭ್ಯವಾದಮೇಲೆ ವ್ಯಾಸರಾಯರ ಬುದ್ಧಿಮತ್ತೆಗೆ ಮೆಚ್ಚಿದಶ್ರೀಪಾದರಾಜರು ತಮ್ಮಗ್ರಂಥಗಳುವಿಶೇಷ ಪ್ರಕಾಶಕ್ಕೆ ಬರದಿದ್ದರೂ ಕೊರತೆಯಿಲ್ಲ ನಿಮ್ಮಿಂದ ರಚಿತವಾದ ಗ್ರಂಥಗಳು ಪ್ರಕಾಶಕ್ಕೆ ಬರಲೆಂದು ಶಿಷ್ಯವಾತ್ಸಲ್ಯದಿಂದ ಹರಸಿದರು. ಹೀಗಾಗಿ ವ್ಯಾಸ

---

§ ಈ ಮಹಿಮೆ "ಪೆನಗೊಂಡ" ಎಂಬಲ್ಲಿ ನಡೆದುದಾಗಿ ತಿಳಿದು ಬರುವುದು.

‡ ಪಾಠಾಂತರದ ಕಥೆ ಇಷ್ಟೆ—'ಯತಿಗಳಿಗೆ ದೇಹವನ್ನು ಬೊಜ್ಜಿನಿಂದ ಬೆಳೆಸುವ ಈ ಭಕ್ಷ್ಯಭೋಜ್ಯಾದಿಗಳೇಕೆ? ದೇಹಧಾರಣೆಗೆ ಮಾತ್ರ ಆಹಾರ ಸೇವನೆ ಸಾಲದೆ? ಎಂದು ಯಾರೋ ಕೇಳುವಂತೆ ಹಂಗಿಸಿದಾಗ ಶ್ರೀಪಾದರಾಜರು ಉಂಡುದನ್ನು ಉಂಡಂತೆ ಮುಖದಿಂದ ಹೊರಗೆ ತೆಗೆದು ಹಸಿದ ಹೊಟ್ಟೆಯನ್ನು ತೋರಿದರೆಂದು ಪ್ರತೀತಿ ಇದೆ.

ರಾಯರ ಗ್ರಂಥಗಳು ಮಧ್ವಮತದ ಗೋಪುರದ ಕಲಶಗಳಂತೆ ಪ್ರಕಾಶಕ್ಕೆ ಬಂದುವು. ವಾಗ್ವಜ್ರಾದಿ ಶ್ರೀಪಾದರಾಜರ ಸಂಸ್ಕೃತ ಗ್ರಂಥಗಳು ಅಷ್ಟೊಂದು ಪ್ರಕಾಶಕ್ಕೆ ಬರಲಿಲ್ಲ. ಹಾಗೆಂದು ಶ್ರೀಪಾದರಾಜರು ಪಂಡಿತರಲ್ಲೆಂದು ತಿಳಿಯಬಾರದೆಂದು ಈ ಹಿಂದಿನ ಕಥಾ ಭಾಗಗಳಿಂದಲೇ ವಿದಿತವಾಗಿದೆ.

ಕಾಶಿ, ಕಂಚಿ, ಕುಂಭಕೋಣಾದಿಗಳು ಶ್ರೀಪಾದರಾಜರ ಕಾಲದಲ್ಲಿ ವಿದ್ಯಾಕೇಂದ್ರಗಳು. ಈ ಸ್ಥಳಗಳಲ್ಲಿ ಶ್ರೀಪಾದರಾಜರು ಪ್ರತಿವಾದಿ ಮತ್ತ ಗಜಗಳ ಕುಂಭಸ್ಥಲಗಳನ್ನು ವಾದಿಸಿಂಹರಾಗಿ ಭೇದಿಸಿ ಜಯಧ್ವಜವನ್ನೆತ್ತಿ ರಾರಾಜಿಸಿದ ಅಸಾಧಾರಣ ಪಂಡಿತರು.

ಕನ್ನಡ ಕೃತಿಗಳಲ್ಲಿ ಅಚ್ಚಗನ್ನಡದ ಸೊಬಗಿನ ಅಮೃತ ನದಿ ಸೂಸಿ ಹರಿಯುತ್ತಿರುವುದು ವ್ಯಾಸರಾಯರ ಕೃತಿಗಳಲ್ಲಿ ಎಂಬುದು ಸರ್ವ ಕನ್ನಡಿಗ ರಿಗೂ ಅರಿತ ವಿಷಯ. ಕಾರಣ ಅವರು ಮೈಸೂರು ದೇಶದವರು. ಶ್ರೀಪಾದ ರಾಜರೂ ಮೈಸೂರು ದೇಶದವರೇ. ಆದರೆ ಇಂದು ವ್ಯಾಸರಾಯರ ಕನ್ನಡ ಕೃತಿಗಳಷ್ಟು ಶ್ರೀಪಾದರಾಜರದು ದೊರಕಿಲ್ಲವಾದುದರಿಂದಲೂ ಸರ್ವವಿಧ ದಿಂದಲೂ ಶಿಷ್ಯರಮೇಲ್ಮೆಯನ್ನೇತೋರಿ ಹರಸಿದ ಶ್ರೀಪಾದರಾಜರ ಇಚ್ಛೆ ಯಂತೆಯೂ ಕನ್ನಡ ದಾಸರ ಕೃತಿಗಳಲ್ಲಿ ವ್ಯಾಸರಾಯರ ಕೃತಿಗೇ ಪ್ರಥಮ ಸ್ಥಾನದೊರಕಿರುವುದಾದರೂ ಶ್ರೀಪಾದರಾಜರ ಕೃತಿಯು ಕನ್ನಡದ ಸೌಂದ ರ್ಯಕ್ಕೆ ಕಿಂಚಿತ್ತೂ ಊನವನ್ನು ತಂದಿಲ್ಲ. ಗುರುಶಿಷ್ಯರಿಬ್ಬರ ಕನ್ನಡ ಶೈಲಿ ಅತಿಮಧುರ ಬಲು ಸುಂದರವಾಗಿದೆ ಎಂದರೆ ಕನ್ನಡ ಭಾಷೆಯ ಮರ್ಮ ಬಲ್ಲವರೆಲ್ಲರೂ ಒಪ್ಪುವರು. ಈಗ ಸುಮಾರು ಎಂಭತ್ತು ವರ್ಷ ಗಳಿಂದ ಮೈಸೂರು ದೇಶದ ಕನ್ನಡದಲ್ಲಿ ಇಂಗ್ಲಿಷ್ ಶಬ್ದಗಳು ವಿಶೇಷ ವಾಗಿ ಬೆರೆತು ಸುಧಾರಣೆಯೆಂದರೂ ಸ್ವಲ್ಪ ಮೈಲಿಗೆಯಾಗಿದೆ—ಇನ್ನು ಮುಂದೆ ಪುನಃ ಮೈಸೂರು ದೇಶದ ಕನ್ನಡ ಶುದ್ಧವಾದರೂ ಆಗಬಹುದು. ಆ ಕೀರ್ತಿಗೆ ಭಾಗಿಗಳಾಗುವ ಯೋಗ್ಯತೆ ಕರ್ನಾಟಕ ಪ್ರಾಂತ ಏಕೀಕರ ಣಕ್ಕೆ ಹೆಣಗಾಡಿ ಸಾಧಿಸಿದವರಿಗಾಗಿ ಮೀಸಲು. ಈಗ ಪ್ರಚಲಿತ ವಿರುವ ಮೈಸೂರು ದೇಶದ ಕನ್ನಡಿಗರ ಕನ್ನಡದಲ್ಲಿ ಮಾತ್ರ ಮಾತಿಗೊಂದು ಗೀತು ಇದ್ದಂತೆ ಇಂಗ್ಲಿಷ್ ಶಬ್ದಗಳೂ ಪಂಕ್ತಿಗಳೂ

ಜೋಡಿಸಲ್ಪಡುತ್ತಿವೆ ಎಂದು ಪಶ್ಚಾತ್ತಾಪದಿಂದ ನುಡಿದರೆ ಕನ್ನಡಿಗರು ಬೇಸರಿಸಲಾರರು. ಪರಿಸ್ಥಿತಿಯು ಎಲ್ಲಿಗೆ ಮುಟ್ಟಿದೆ ಎಂದರೆ ಮಡಿವಂತರ ಮಕ್ಕಳೂ ಶ್ರಾದ್ಧಕಾಲದಲ್ಲೂ ಪುರೋಹಿತರನ್ನು ಕುರಿತು ಪಿಂಡಗಳು ಇಷ್ಟೊಂದು big size ಬೇಕೇ 'Sir! small size' ಸಾಲದೇ ಎಂದು ಪ್ರಶ್ನಿಸುವದೂ ರೂಢಿಯಾಗಿದೆ. ಇರಲಿ. ಎಂದು ಕನ್ನಡಾಂಬೆ ಪುನಃ ಕಂದೆರೆವಳೋ ಕಾಯೋಣ!

ಶ್ರೀಪಾದರಾಜರ ಕನ್ನಡಕೃತಿಯು ಸ್ವಾರಸ್ಯಕ್ಕಾಗಿ ಸಂದರ್ಭೋಚಿತವಾಗಿ ಕೆಲವನ್ನು ಮಾತ್ರ ಆಯ್ದು ಕೊಂಡರೆ ಅವರ ಸರಳ ಸುಮಧುರ ಕುಂದಣಕಟ್ಟಿದಂಥ ಕವಿತಾವಾಹಿನಿಯ ಅವ್ಯಾಹತಪ್ರವಾಹ ಸರಣಿಯ ಚೆಲುವನ್ನು ಕಾಣಬಹುದು.

೧) **'ನಾರಾಯಣ ನಿನ್ನ ನಂಬಿದೆ ಲಕ್ಷ್ಮೀನಾರಾಯಣ** ॥ ಪ ॥' ಎಂಬ ದೇವರ ನಾಮದಲ್ಲಿ ಕೊನೆಯ ನುಡಿ—

ರಂಗನಗರದಿ ಉತ್ತುಂಗನೆ ಮಹೋ
ತ್ತುಂಗ ಗುಣಗಳ ತರಂಗನೆ-
ಗಂಗಾಜನಕ ಗರುಡ ತುರಂಗನೆ ಅ
ನಂಗ ಪಿತನೆ ರಂಗವಿಠಲನೆ

೨) **'ದುರಿತಗಜಪಂಚಾನನ'** ಎಂಬ ನೃಸಿಂಹ ದೇವರ ಸ್ತೋತ್ರದಲ್ಲಿ ದುರಿತಗಳನ್ನು ಪರಿಹರಿಸಿ ಕಾಯೋ ಸ್ವಾಮಿ ಎಂದು ಉಪಮಾನ ಸಹಿತವಾಗಿ—**'ನಾವು ದುರಿತ ರಾಶಿಯಲ್ಲಿ ಮುಳುಗಿದ್ದರೂ ನೀನು ಕಾಯದೆ ಇರಲು ಸಲ್ಲ!'** ಎಂಬರ್ಥದಿಂದ ಪ್ರಾರ್ಥಿಸುತ್ತಾರೆ.

**ಶ್ರೀರಾಗ ತಾಳ ಆಟ**

ದುರಿತಗಜ ಪಂಚಾನನ—ನರ
ಹರಿಯೆ ದೇವರದೇವ ಕಾಯೋ ಗೋವಿಂದ ॥ ಪ ॥
ಹೆಸರುಳ್ಳ ನದಿಗಳ ಒಳಕೊಂಬ ಸಾಗರ
ಬಿಸುಡುವನೆ ಕಾಲಹೊಳೆಗಳ ಗೋವಿಂದ ॥ ಪ ॥

'ತಾನು ಗಂಗಾದಿ ಪವಿತ್ರ ನದಿಗಳಿಗೆ ಪ್ರವೇಶಕ್ಕೆ ಎಡೆಕೊಡುವ ಯೋಗ್ಯತೆಯವನು ಎಂದು ಕಾಲನಿಂದ ದಾಟಬಹುದಾದ ಕಾಲುವೆಗಳಂತಿರುವ-ಪುಣ್ಯನದಿಗಳೆಂದು ಗಣಿಸದಿರುವ ನದಿಗಳಿಗೂ ಸಮುದ್ರ ಎಡೆ ಕೊಡದೆ ಬಿಡುವನೇ? ನೀನು ಗುಣಸಮುದ್ರ. ನಾವು ದೋಷಿಗಳಾದರೂ ನಮ್ಮನ್ನು ಆಶ್ರಯವಿತ್ತು ಪರಿಗ್ರಹಿಸಿ ಉದ್ಧರಿಸುವುದು ದಯಾಮಯನಾದ ನಿನ್ನ ಬಿರುದಲ್ಲವೆ? ನೀನು ಕರುಣಾ ಸಮುದ್ರನಲ್ಲವೆ?" ಎಂದು ತಾತ್ಪರ್ಯ.

ಹೆತ್ತಮಕ್ಕಳು ಹುಚ್ಚರಾದರೆ ತಾಯ್ತಂದೆ
ಎತ್ತದೆ ನೆಲಕೆ ಬಿಸುಡುವರೆ ಗೋವಿಂದ || ೨ ||
ಒಂದು ಮೊಲಕೆ ಆರು ಹುಲಿಗಳು § ಕವಿದಿವೆ
ಬಂಧನ ಬಿಡಿಸಯ್ಯ ತಂದೆ ಗೋವಿಂದ || ೩ ||
ಮುನ್ನ ಮಾಡಿದ ಕರ್ಮ ಬೆನ್ನಬಿಡದೆ ಇರೆ
ನಿನ್ನನೋಲೈಸ ಬೇಕಯ್ಯ ಗೋವಿಂದ || ೪ ||
ಆಪತ್ತು ತಾಪತ್ರಯ ಬಿಡದಿದ್ದರೆ
ಶ್ರೀಪತಿ ಶರಣೆನ್ನಲ್ಯಾಕೋ ಗೋವಿಂದ || ೫ ||
ಅರಸು ಮುಟ್ಟಲು ದಾಸಿ ರಂಭೆಯಾದಳು ದೇವ
ಪರಶು ಮುಟ್ಟಲು ಲೋಹ ಸ್ವರ್ಣ ಗೋವಿಂದ || ೬ ||
ಮಾನಾಭಿಮಾನದೊಡೆಯ ರಂಗ ವಿಠ್ಠಲ
ಜ್ಞಾನಿಗಳರಸನೆ ಕಾಯೋ ಗೋವಿಂದ ‡ || ೭ ||

**ಲಕ್ಷ್ಮೀನೃಸಿಂಹ ಪ್ರಾದುರ್ಭಾವ ದಂಡಕದಲ್ಲಿ ಹಿರಣ್ಯಕಶಿಪುವಿನ ಆರೋಪ ಹೀಗಿದೆ—**

' ......................ಹೋಯೆಲೋ
ದುರ್ವಿನೀತಾಯೆಲೋ ಮಂದಬುದ್ಧೇಯೆಲೋ

---

§ ಅರಿಷಡ್ವರ್ಗಗಳು—ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ.

‡ ಈ ದೇವರ ನಾಮವನ್ನು ನಿತ್ಯದಲ್ಲೂ ಪಾರಾಯಣ ಮಾಡುತ್ತಿದ್ದರೆ ವಿಶೇಷತಃ ಆಪತ್ಕಾಲದಲ್ಲಿ ಹೇಳಿಕೊಂಡರೆ ಸಮಸ್ತ ವಿಪತ್ಪರಿಹಾರಕವೆಂದು ಭಾವುಕಜನ ನಂಬಿ ಅದರಂತೆ ಇಂದಿಗೂ ನಡೆಯುತ್ತಿರುವರು.

ಇಂತುನೀಸ್ತಬ್ಧನಾ ದೇತಕೋ ವಂಶಘಾ
ತೀಯಲೋ ಪಾಪ ಜಾತೀಯೆ ನೀಹೀಗೆ—ಮ—
ಚ್ಛಾಸನಾತೀತನಾಗಿಪ್ಪೊಡೇ ನಿನ್ನನಿ
ನ್ನಾಯಮ ದ್ವಾರಕೇ ಕಳುಹುವೆಂ ನೋಡೆಲಾ
ನಾನು ಕೋಪಿಷ್ಠನಾಗಿಪ್ಪೊಡೇ ಅಂಜಿ ಮೂ
ಲೋರ್ಕಗಳ್ ಲೋಕಪಾನೀಕಗಳ್ ಕಂಪಕಾ
ಣುತ್ತ ಎಂಥಾ ಬಲಿಷ್ಟನ್ನನೀನೆನ್ನ ಸಂ
ಪದ್ಬಲಶ್ರೀಯನಾಶ್ರೈಸದೇ ಬಿಟ್ಟರಿ
ನ್ನಾವನಲ್ ನೀಂ ಬಲ ಶ್ರೀಯನಾಶ್ರೈಸುವೇ
ಯೋಎಲಾ ಏಕೆ ಮಚ್ಛಾಸನಾತೀತನಾ
ಗೂವಿಯೋ ಕಂದ ಪೇಳೆಂದರೇ ತಂದೆಗಾ
ಕಂದ ಸಂಭಾಷಿಪಂ .... .... ... .... .... .... ...."

ಮುಂದೆ ಇದೇ ದಂಡಕದಲ್ಲಿ ಶ್ರೀಪಾದರಾಜರು ನೃಸಿಂಹಾವತಾರ ಪ್ರಕಾರವನ್ನು ನಿರೂಪಿಸಿದ ಪರಿಯ ವೈಖರಿ ನೋಡಿ —

.... .... .... .... .... .... .... ... ಛಿಟಾ
ಛಿಟ್ ಛಿಟಾಂಗಾರಗಳ್ ಬೀಸೆ ಇದಾವುದೋ
ಭೂತ ಉದ್ಭೂತವಾಗೊಪ್ಪಿತೆಂದಾಗ ಮೂ
ಲೋರ್ಕವೆಲ್ಲಾ ಸಮುಲ್ಲೋಕವಾಗಿಪ್ಪುದಾ
ವೇಳೆ ತದ್ಭೃತ್ಯ ವಾಕ್ಯಂ ಸತ್ಯವಂ ಮಾಡೆ ಬೇ
ಕಾಗಿ ಸರ್ವತ್ರತಾನ್ ತನ್ನ ವ್ಯಾಪ್ತಿತ್ವಮಂ
ಪಥ್ಯವಾಗಿಪ್ಪವೋಲ್ ಅದ್ಭುತಾಕಾರ ಪೊ
ತ್ತಂ ಜಗದ್ಭರ್ತೃರ್ ತಾನೊಂದೆ ಸಿಂಹಾಕೃತೀ
ಯಾಗದೇ ಮರ್ತ್ಯರ್ ಮೂರ್ತ್ಯರ್ಲ್ಲದೇ ತತ್ಸಭಾ
ಸ್ತಂಭದಲ್ ಡಿಂಭ ಸಂಭಾವನಕ್ಕಾಗಿ
ಸಂಭೂತನಾದಂ .... .... ... .... ... ....'

"ಸತ್ಯಂ ವಿಧಾತುಂ ನಿಜ ಭೃತ್ಯ ಭಾಷಿತಂ
ವ್ಯಾಪ್ತಿಂಚ ಭೂತೇಷ್ವ ಖಿಲೇಷು ಚಾತ್ಮನಃ ||

ಅದೃಷ್ಟತಾತ್ಯದ್ಭುತ ರೂಪಮುದ್ವಹನ್
ಸ್ತಂಭೇ ಸಭಾಯಾಂ ನಮೃಗಂ ನಮಾನುಷಂ || ೭-೮-೧೮ ||

ಈ ಭಾಗವತ ವಾಕ್ಯದ ಅನುವಾದರೂಪವಾಗಿರುವ ಈ ಗದ್ಯಕ್ಕೆ ವಿದ್ವನ್ಮಣಿಗಳೂ ಶಿರಬಾಗದಿರರು.

**೪. ಕೃಷ್ಣನ ಕೊಳಲ ದನಿ—ಭ್ರಮರ ಗೀತೆಯಿಂದ**

**ಮಧುಕುಂಜ ವನದಲ್ಲಿ ಮಧುವೈರಿ ಕೊಳಲೂದಲಾ**
**ಮಧುರ ಸ್ವರ ಕೇಳಿ** ಮದಿರಾಕ್ಷಿಯರೆಲ್ಲ ಧಾ
ಮದ ಧ್ಯಾನ ಬಿಟ್ಟು ಮೃಗಮದ ಗಂಧವಿಡಿದೈದಿ
ಮದನನಯ್ಯನ ಕಾಣುತ **ಶ್ರೀ ಹರಿಯು**
**ಮದವೇರಿ** § ತಲೆವಾಗಿ ಮೇದಿನಿ ನಿಟ್ಟಿಸಲಾಗ
ಮೃದು ವಾಕ್ಯದೆಮ್ಮನಪ್ಪಿ ಅಧರಾಮೃತ ಭೋಜನ
ಕೊದಗುವ ಸತತ ಸನ್ನದ್ಧನಮ್ಮಗಲಿ ಕ
ಲ್ಲಿದೆಯಾದನೆಂತೊ ಕೃಪಾಳು ಹೇಕಿತವ ‡

**೫. ಕೊಳಲಿನ ಕರೆ ಇನ್ನೊಂದು ಪದ್ಯದಲ್ಲಿ—**

ಅಂದದಿಂದಲಾನಂದ ಮದವೇರಿ ಮು
ಕುಂದನಂಘ್ರಿ ಮುದದಿಂದ ಸ್ಮರಿಸಿ ಬರು
ವಂದ ನೋಡಿ ಗೋವಿಂದ ಕೊಳಲ ಬಹು
ಅಂದದೊಳಿಡೆ ಇಂದುವದನೆಯರು
ಚಂದ್ರನುದಯವಾದಂತೆ ಆಯ್ತು ಮನ
ಗಂಧ ಕಸ್ತೂರಿ ತಂದು ಆಗ ಹರಿ
ಕಂಧರದೊಳಗಿಡೆ ರಂಗ ವಿಠಲ ದಯ
ದಿಂದ ನೋಡ್ದ ಪುರಂಧ್ರಿಯರನ್ನು

ಮೇಲಿನ ನುಡಿ 'ರಂಗ ಕೊಳಲನೂದಲಾಗಿ' ಎಂಬ ದೇವರ ನಾಮದ್ದು.

---

§ ಹರಿ ಭಕ್ತಿಯಿಂದ ಮದಹತ್ತಿ = ಭಕ್ತ್ಯುನ್ಮತ್ತರಾಗಿ

‡ ಈ ಭ್ರಮರ ಗೀತೆಯನ್ನು ಸಂಪೂರ್ಣ ಅಚ್ಚು ಹಾಕಿಸಿ ಗ್ರಾಹಕರು ಪ್ರತ್ಯೇಕ ಹಣ ಕಳಿಸಿದರೆ ಕಳಿಸಲಾಗುವುದು. ಬೆಲೆ ೦—೨—೦

ಪಂಚರತ್ನಗಳಂತಿರುವ ಈ ಐದು ಪದ್ಯಗಳ ನುಡಿಯನ್ನು ಆಯ್ದು ಕೊಂಡು ಕನ್ನಡ ನುಡಿಯ ಜಾಣ್ಮೆಯನ್ನು ನಮ್ಮ ಹಿರಿಯರು—ಅಪರೋಕ್ಷಿ ಗಳು ತಾವು ರಚಿಸಿದ ಕೃತಿಗಳಿಂದ ಎಷ್ಟು ಮುದ್ದಾಗಿ ಹೊರಸೂಸಿರುವ ರೆಂಬುದನ್ನು ಅರಿವಿಗಾಗಿ ಮಾತ್ರ ಉದಾಹರಿಸಿದುದಾಗಿದೆ. ಇಂಥಾ ಸಾವಿ ರಾರು ಏಕೆ ಲಕ್ಷೋಪಲಕ್ಷ ಲಲಿತ ಸಾಹಿತ್ಯವು ಅಪರೋಕ್ಷಿಗಳಾದ ಹರಿ ದಾಸರ ಕೃತಿಗಳ ರಚನೆಯಿಂದ ಬೆಳಕಿಗೆ ಬಂದಿವೆ.

## ಮಹಿಮೆ

**ಯಾಕೆ ಪುಟ್ಟಿಸಿದೆ ನೀ ಸಾಕಲಾರದೆ ಜಗ**
**ದೇಕ ಕಾರಣ ಪುರುಷನೇ ಕೃಷ್ಣ** || ಪ ||

ಅಪರೋಕ್ಷಿಗಳನೇಕರಿಂದ ರಚಿತವಾದ ಅನೇಕ ಪದ ಸುಳಾದಿಗಳನ್ನು ಇಂದಿಗೂ ಪಾರಾಯಣ ಮಾಡಿ ಅನೇಕ ಭಗವದ್ಭಕ್ತರು ಸಕಲ ಸಾಂಸಾರಿಕ ದುರಿತಗಳಿಂದ ಪಾರಾಗುತ್ತಿರುವುದು ಪ್ರತ್ಯಕ್ಷವಾಗಿದೆ.

ಶ್ರೀಪಾದರಾಜರು ಬಂಕಾಪುರದಲ್ಲಿರುವಾಗ ಒಬ್ಬ ದರಿದ್ರನೂ ಅತ್ಯಂತ ವೃದ್ಧನೂ ದೀನನೂ ಆದ ವಿಪ್ರನು ಬಂದು ಸ್ವಾಮಿಗಳ ಚರಣಗಳ ಮೇಲೆ ಬಿದ್ದು "ನಾನು ದರಿದ್ರ-ದೇಹ ಜೀರ್ಣವಾಗಿದೆ—ವಿದ್ಯೆಯ ಗಂಧವೇ ನನಗಿಲ್ಲ. ಸಂಸಾರ ತಾಪತ್ರಯದಲ್ಲಿ ಬಳಲಿ ಕಂಗೆಟ್ಟಿರುವ ಪಾಮರ ನಾನು. ನನ್ನ ಉದ್ಧಾರದ ಮಾರ್ಗವೇನು ಕರುಣಿಸಬೇಕು" ಎಂದು ಅಳ ತೊಡಗಲು ದೀನದಯಾಪಾರವಶ್ಯದಿಂದ ಅವನನ್ನು ಕುರಿತು "ಅಪ್ಪಾ! ಚಿಂತಿ ಸಬೇಡ! ಶ್ರೀ ಹರಿಯ ನಾಮವನ್ನು ಆನಂದದಿಂದ ಉಚ್ಚರಿಸಿ ಶ್ರೀ ಹರಿಯ ಚರಣಾರವಿಂದಗಳಲ್ಲಿ ಅಚಂಚಲ ಭಕ್ತಿಯನ್ನು ಸಾಧಿಸುತ್ತಾ ಬಾ! ನಿನಗೆ ನಿತ್ಯ ಪಾರಾಣಕ್ಕೆ ಒಂದು ಉಪದೇಶವನ್ನು ಮಾಡುವೆವು" ಎಂದು–"**ಯಾಕೆ ಪುಟ್ಟಿಸಿದೆ ನೀ ಸಾಕಲಾರದೆ ಜಗದೇಕಕಾರಣ ಯಾಕೆ ವಿಷ್ಣುವೇ!**" ಎಂಬ ದೇವರ ನಾಮವನ್ನು ಉಪದೇಶಿಸಿದರು. ಆತನು ಆ ಪದ್ಯವನ್ನೇ ಮಂತ್ರೋಪದೇಶವೆಂಬಷ್ಟು ಶ್ರದ್ಧೆಯಿಂದ ತಾರಕ ಮಂತ್ರದಂತೆ ತಿಳಿದು ನಿತ್ಯವೂ ಪಠಿಸಿ ಜ್ಞಾನಿಯಾಗಿ ಶ್ರೀನಿಧಿಯ ಅನುಗ್ರಹವನ್ನು ಪಡೆದನು. §

---

§ ಈ ಮಹಿಮೆ ಬಂಕಾಪುರದಲ್ಲೆ ನಡೆದುದೆಂಬುದು ಈ ದೇವರ ನಾಮ ದಿಂದಲೇ ತಿಳಿಯುವುದು.

## ಶ್ರೀಮಧ್ವನಾಮ

ಶ್ರೀಪಾದ ರಾಜರಿಂದ ರಚಿತವಾದ **'ತ್ರೇತೆಯಲಿ ರಘುಪತಿಯ ಸೇವೆ ಮಾಡುವೆನೆಂದು ವಾತಸುತ ಹನುಮಂತ ನೆಂದೆನಿಸಿದ ॥ ಪ್ರೀತಭಾವದಿ ತರಣಿ ಬಿಂಬಕ್ಕೆ ಲಂಘಿಸಿದ ಈತಗೆಣೆಯಾರು ಮೂಲೋಕದೊಳಗೆ** ॥ ೧ ॥' ಹೀಗೆ ಹನುಮಾವತಾರದಿಂದಾರಂಭವಾಗಿ **'ಆ ಮಾರುತನು ಭೀಮನೆನಿಸಿ ದ್ವಾಪರದಲ್ಲಿ ಸೋಮಕುಲದಲಿ ಜನಿಸಿ ಪಾರ್ಥರೊಡನೆ ॥ ಭೀಮವಿಕ್ರಮ ರಕ್ಕಸರನೆ ಮುರಿದಟ್ಟಿದಾ ಆ ಮಹಿಮೆ ನಮ್ಮ ಕುಲ ಗುರು ರಾಯರು'** ಹೀಗೆ ಭೀಮಾವತಾರ ಮಹಿಮಾ ಕೆಲವು ಪದ್ಯಗಳಲ್ಲಿ ಹೇಳಿ—**ತುಂಗ ಕುಲಗುರು ವರನ ಹೃತ್ಕಮಲದಲಿ ನಿಲಿಸಿ ಭಂಗವಿಲ್ಲದ ಸೌಖ್ಯ ಸುಜನರಿಗೆಲ್ಲ ॥ ಹಿಂಗದಲೆ ಕೊಡುವ ನಮ್ಮ ಮಧ್ವಾಂತರಾತ್ಮಕನ ರಂಗ ವಿಠ್ಠಲನೆಂದು ನೆರೆ ಸಾರಿರೋ**॥' ಎಂಬುದಾಗಿ ಮಧ್ವಾವತಾರ ಮಹಿಮೆಯನ್ನು ಹೇಳಿ ಅವ ತಾರತ್ರಯೋಪೇತ ಧರ್ಮ ಸಂಸ್ಥಾಪನಾಚಾರ್ಯ ಶ್ರೀ ಮುಖ್ಯಪ್ರಾಣ ದೇವರ ಲೀಲೆಯನ್ನು **ಮಧ್ವನಾಮ**ದಿಂದ ತಿಳಿಯಬಹುದು. ಈ ಪದ್ಯವನ್ನು ಹರಿ ಅನುಗ್ರಹಕ್ಕೆ ಗುರು ಅನುಗ್ರಹವೇ ಕಾರಣವಾದುದರಿಂದ ಪಾಮರರೂ ಗುರುಗುಣಸ್ತವನದಿಂದ ಉದ್ಧೃತರಾಗಲೆಂದು **ವಾಯುಸ್ತುತಿ ಶ್ರೀ ಮತ್ಸುಮಧ್ವ ವಿಜಯ** ಪಾರಾಯಣಕ್ಕೆ ಅವಕಾಶ—ಅಧಿಕಾರಗಳಿಲ್ಲದವರೂ ಉದ್ಧಾರವಾಗಬೇಕೆಂಬ ಕರುಣೆಯಿಂದ ರಚಿಸಿರುವರು. ಇತ್ತೀಚಿನ ತನಕ ಮನೆ ಮನೆಯಲ್ಲಿ ನಿತ್ಯ **ಮಧ್ವನಾಮ**ವನ್ನು ಕನ್ನಡಿಗರಾದ ಮಾಧ್ವರು ಹೇಳಿಕೊಳ್ಳುತ್ತಿದ್ದರು ಈಗ ಬಹಳ ವಿರಳವಾಗಿದೆ. ಇದು ಶೋಚನೀಯ ಸಂಗತಿ. 'ಕಾಲಾಯ ತಸ್ಮೈ ನಮಃ' ಎನ್ನಬೇಕಷ್ಟೆ.

ಶ್ರೀಪಾದರಾಜರಿಂದ ರಚಿತವಾದ ಮಧ್ವನಾಮ ಪಾರಾಯಣದಿಂದ ಸಕಲೇಷ್ಟಗಳನ್ನು ಹೊಂದಬಹುದು. ‡

---

‡ ಇದನ್ನು ಸಾಕಷ್ಟು ಗ್ರಾಹಕರ ಅಪೇಕ್ಷಾ ಪತ್ರ ಬಂದರೆ—"**ಯಾಕೆ ಪುಟ್ಟಿದೆ**" ಎಂಬ ದೇವರ ನಾಮದೊಂದಿಗೆ ಅಚ್ಚು ಹಾಕಿಸಿ ಕಳಿಸಲಾಗುವುದು. ಬೆಲೆ ೦—೧—೦

ಶ್ರೀಪಾದರಾಜರಿಂದ ರಚಿತವಾದ ಶ್ರೀಮಧ್ವನಾಮ ಪಾರಾಯಣದ ಫಲ ಬಾಹುಲ್ಯವನ್ನು ಶ್ರೀಮಜ್ಜಗನ್ನಾಥ ದಾಸವರ್ಯರು–

**"ಶ್ರೀಪಾದರಾಯ ಹೇಳಿದ ಮಧ್ವನಾಮ ಸಂತಾಪ ಕಳೆದಖಿಳ ಸೌಖ್ಯವ ನೀವುದು ॥ ಶ್ರೀಪತಿ ಜಗನ್ನಾಥ ವಿಠಲನ ತೋರಿ ಭವ ಕೂಪಾರದಿಂದ ಕಡೆಗೆದಿಸುವುದು ॥"** ಎಂಬುದಾಗಿ ಅಪ್ಪಣೆಕೊಡಿಸಿರುವರು. ಅಂದ ಮೇಲೆ ಚತುರ್ವಿಧ ಪುರುಷಾರ್ಥಪ್ರದವೆಂದು ಸರ್ವಜ್ಞರ ಅನುಯಾಯಿಗಳೆಲ್ಲಾ ತಿಳಿದೇ ತಿಳಿಯುವರು.

## ಅನೇಕ ಮಹಿಮೆಗಳು

ಸಂಚಾರ ಮಾಡುತ್ತಾ ಚೀಕಲಪರವಿಗೆ ಬಂದು ಅಲ್ಲೊಂದು ಅಶ್ವತ್ಥ ವೃಕ್ಷದಲ್ಲಿ ನರಸಿಂಹ ದೇವರನ್ನು ಸನ್ನಿಹಿತರಾಗುವಂತೆ ಪ್ರಾರ್ಥಿಸಿ ಸನ್ನಿಹಿತರನ್ನಾಗಿ ಮಾಡಿ **ಅಶ್ವತ್ಥ ನರಸಿಂಹ ಕ್ಷೇತ್ರವನ್ನಾಗಿ ಮಾಡಿದರು.**

ಪುರುಷೋತ್ತಮ ತೀರ್ಥರ ಗುಹೆಯಲ್ಲಿರುವಾಗ ಶ್ರೀ ವ್ಯಾಸರಾಯರನ್ನು ಒಂದು ಹೆಬ್ಬಾವು ನುಂಗಲೆತ್ನಿಸುತ್ತಿರಲು ಸರ್ಪ ಭಾಷೆಯಿಂದಲೇ ಅದರೊಡನೆ ವ್ಯವಹರಿಸಿ ಬಿಡಿಸಿ ವ್ಯಾಸರಾಯರ ಅಪಮೃತ್ಯುವನ್ನು ಪರಿಹರಿಸಿದರು.

ಒಂದು ಮನೆಗೆ ಬೆಂಕಿ ಹತ್ತಿದಾಗ ತಮ್ಮ ಕಮಂಡಲೋದಕ ಪ್ರೋಕ್ಷಣ ಮಾತ್ರದಿಂದ ನಂದಿಸಿ ಮನೆಯನ್ನೂ ಮನೆಯಲ್ಲಿರುವವರನ್ನೂ ಉಳಿಸಿದರು.

ಪರಮಾತ್ಮನು ತನ್ನ ಭಕ್ತರಿಗೆ ಕೀರ್ತಿಕೊಡಿಸಲು ಇಂಥ ಸಂದರ್ಭ ಸನ್ನಿವೇಶಗಳನ್ನೊದಗಿಸುವನು. ಆಗ ಪವಾಡಗಳನ್ನು ತೋರುತ್ತಿರುವುದು ತಮ್ಮಲ್ಲಿ ಸಜ್ಜನರಿಗೆ ನಂಬಿಕೆ ಹುಟ್ಟಿ ತಮ್ಮ ಮಾತಿನಲ್ಲಿ ಅವರಿಗೆ ನಂಬಿಕೆ ಹೆಚ್ಚಿ ಸದಾಚಾರಪರರಾಗಿ ಸಚ್ಛಾಸ್ತ್ರ ಜ್ಞಾನ ಹೊಂದಿ ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾಗಲಿ ಎಂದೇ ಹೊರತು ಮೆರೆಯಲಿಕ್ಕಲ್ಲವೆಂಬುದನ್ನು ಮಹಿಮೆಗಳನ್ನು ಕೇಳಿ ಮುಖಮುರಿದುಕೊಳ್ಳುವ ಮಹನೀಯರು ಮರೆಯಬಾರದು.

ಕೆಲ ಜನ ಚಾಟೂ ಉಪಾಸನೆಯಿಂದ ದುಷ್ಟ ಸಿದ್ಧಿ ಪಡೆದು ನಾಲ್ಕು ದಿನ ಹುಚ್ಚುಹುಚ್ಚಾಗಿ ಮೆರೆದು ಕೊನೆಗೆ ನಾಮಾವಶೇಷವಿಲ್ಲದಂತಾಗುವರು.

ಆದರೆ ಮಹಾತ್ಮರ ಮಹಿಮೆಗಳನ್ನು ಅಂಥಾ ಕೃತ್ರಿಮಸಿದ್ಧರ ಮಹಿಮೆಗಳೊಂದಿಗೆ ಹೋಲಿಸುವುದು ಶ್ರೇಯಃಪ್ರದವಲ್ಲ. ಮಹಾತ್ಮರ ಮಹಿಮೆಗೆ ಚ್ಯುತಿಯಿಲ್ಲ. ಅಂದಿಂದಿಂದಿಗೂ ಮುಂದೂ ಶ್ರೀಪಾದರಾಜರಂಥ ಮಹಾಮಹಿಮರು ಪೂಜನೀಯರೇ. ಆದರೆ ಕೇವಲ ಮಹಿಮಾ ಪ್ರದರ್ಶನ ಮಾತ್ರಕ್ಕೇ ಮರುಳಾಗಿ ಹುರುಳರಿಯದೆ ಜನ ಕುರಿಗಳಂತೆ ಮುನ್ನುಗ್ಗಿ ಮೋಸಹೋಗದಂತೆ ಎಚ್ಚರದಿಂದಿರ ಬೇಕೆಂಬುದೂ ನಿಜವಾಗಿ ಸತ್ಯ—ಸೂಕ್ತ. ಸಾತ್ವಿಕಮಾರ್ಗಾವಲಂಬಿಗಳಾದ ಪುಣ್ಯಪುರುಷರಲ್ಲಿ ನಮ್ಮ ಭಕ್ತಿಯನ್ನು ವೃದ್ಧಿಪಡಿಸಿಕೊಂಡು ನಾವು ಧನ್ಯರಾಗಲು ಯತ್ನಪಡಬೇಕಾದುದು ಮಾನವಕೋಟಿಯ ಕರ್ತವ್ಯ. ಸಾತ್ವಿಕ ಅಸಾತ್ವಿಕ ಎಂದರಿಯುವುದು ಹೇಗೆ? ಎಂದರೆ ವಿಚಾರದಿಂದ ತಾನೇ ತಾನಾಗಿ ಅರಿಯುವುದು. ಕುರಿಗಳಂತೆಯೂ ಆಗಬಾರದು. ಅಪನಂಬಿಕೆಯ ಪ್ರಾಣಿಗಳೂ ಆಗಬಾರದು. ಆದಷ್ಟು ಪರಿಶೀಲಿಸಿ ದಾಂಭಿಕವಲ್ಲದ ಯಥಾರ್ಥತತ್ವಾನ್ವೇಷಿಗಳ ಪಂಥವನ್ನು ಅವಲಂಬಿಸಿದರೆ ಜೀವನದ ಗುರಿ ಮುಟ್ಟಬಹುದು.

**ಶ್ರೀಪಾದರಾಜರೇ ಆಗಲಿ ಯಾವ ಮಹಾತ್ಮರೇ ಆಗಲಿ ಅವರಲ್ಲಿರುವ ದೊಡ್ಡಸ್ತಿಕೆ ಎಂದರೆ ಪವಾಡಗಳನ್ನು ತೋರಿದುದಲ್ಲ. ಶ್ರೀ ಹರಿಯಲ್ಲಿ ನಿರ್ವ್ಯಾಜ ಭಕ್ತಿಮಾಡಿ ಶ್ರೀಹರಿಯ ಅನುಗ್ರಹಕ್ಕೆ ಪಾತ್ರರಾಗಿರುವುದೇ ಅವರಲ್ಲಿರುವ ದೊಡ್ಡಸ್ತಿಕೆ. ಶ್ರೀಹರಿಯ ಭಕ್ತರು ಪವಾಡಗಳನ್ನು ತೋರಿದರೆಂದರೆ ಆಶ್ಚರ್ಯವೇ ಅಲ್ಲ.**

## ವೃದ್ಧಾಪ್ಯ-ವೃಂದಾವನ ಪ್ರವೇಶ

ಶ್ರೀಪಾದರಾಜರು ತಮ್ಮ ವೃದ್ಧಾಪ್ಯದಲ್ಲಿ ಮುಳುಬಾಗಿಲಿನಲ್ಲಿಯೇ ವಾಸಮಾಡಿದರು. ಇವರಲ್ಲಿದ್ದ ಮತ್ತೊಂದು ಮಹತ್ವವೆಂದರೆ ಅತಿ ವೃದ್ಧಾಪ್ಯದಲ್ಲೂ ತರುಣರಿಗೆ ಆದರ್ಶಪ್ರಾಯರಾಗಿ ಉತ್ಸಾಹಿಗಳಾಗಿದ್ದರು. ಕರ್ತವ್ಯದಲ್ಲಿ ಔದಾಸೀನ್ಯವನ್ನು ಎಂದಿಗೂ ತಳೆದವರಲ್ಲ. ಪಂಡಿತಪಾಮರರಿಗೆ ಆಶ್ರಯದಾತರು. ಪಾಮರರನ್ನು ಎಂದಿಗೂ ಅಲಕ್ಷಿಸಲಿಲ್ಲ. ಪಂಡಿತರಿಗೆ ಶಾಸ್ತ್ರಪಾಠ, ಪಾಮರರಿಗೆ ತಿಳಿಗನ್ನಡದಲ್ಲಿ ತತ್ವೋಪದೇಶ—ಹಗಲಿರುಳೂ ಹರಿಗುಣಗಾನದಲ್ಲಿ ನಿರತರು. ರೆಪ್ಪೆಗಳಿಗೆ ತಾವೇತಾವಾಗಿ ತೆರೆದು ಮುಚ್ಚುವ ಶಕ್ತಿಯಿಲ್ಲದಷ್ಟು ವಾರ್ಧಿಕ್ಯ ಇವರನ್ನು ಆವರಿಸಿ

ದಾಗಲೂ (ಕೈಯ್ಯಿಂದಲೇ ರೆಪ್ಪೆಗಳನ್ನು ಹಿಡಿದು ಮೇಲೆ ಮಾಡಿಕೊಳ್ಳುತ್ತಾ ಇದ್ದಾಗಲೂ) ಅಂಥಾ ತೀರ ವೃದ್ಧಾಪ್ಯದಲ್ಲೂ ಇವರು ಪಾಠ ಪ್ರವಚನ ಭಜನೆಗಳನ್ನು ಬಿಡದೆ ನಡೆಸುತ್ತಿದ್ದರಂತೆ.

ವ್ಯಾಸತ್ರಯಗಳೆಂದರೆ ದ್ವೈತ ಶಾಸ್ತ್ರದಲ್ಲಿ ಉದ್ಗ್ರಂಥಗಳು. ಶ್ರೀವ್ಯಾಸ ರಾಜರೇ ಈ ಗ್ರಂಥಗಳ ಕರ್ತೃಗಳು. ಅವರಿಗೂ ಶ್ರೀಪಾದರಾಜರೇ ಗುರು ಗಳು. **ಶ್ರೀಪಾದರಾಜರಿಂದ ರಚಿತವಾದ ವಾಗ್ವಜ್ರ** ಗ್ರಂಥವೇ ತಾವು ರಚಿಸಿದ ಗ್ರಂಥಗಳಿಗೆ ಮೂಲವೆಂದು ಹೇಳಿರುವರು. ಹರಿದಾಸ ವಿಜಯ ಮಾಲೆಯ ಮಧ್ಯದಲ್ಲಿ ಶೋಭಿತರಾದ ಕಮಲ ಸುಮ ಸದೃಶರೂ, ಹರಿದಾಸ ಶಿಖಾಮಣಿಗಳಲ್ಲಿ ಶ್ರೇಷ್ಠರೂ ಆದ ಶ್ರೀಪುರಂದರ ದಾಸರಿಗೆ ಪರಮಗುರು ಗಳು ಅಂದ ಮೇಲೆ ನಮ್ಮ ಶ್ರೀಪಾದರಾಜರ ಹಿರಿತನವನ್ನು ಪ್ರತ್ಯೇಕ ಹೇಳಬೇಕಾಗಿಲ್ಲ.

ತೊಂಭತ್ತಾರು ವರ್ಷಗಳ ಕಾಲ ಶ್ರೀ ಗೋಪಿನಾಥ—ಶ್ರೀ ರಂಗ ವಿಠ್ಠಲ ದೇವರ ಪೂಜಾನಿರತರಾಗಿ ಸಂಸ್ಥಾನಾಧಿಪತಿಗಳಾಗಿ ಜ್ಯೇಷ್ಠ ಬಹುಳ ಚತುರ್ದಶೀ ದಿವಸ ಪಾರ್ಥಿವ ದೇಹವನ್ನು ತ್ಯಜಿಸಿ ವೃಂದಾವನ ಪ್ರವೇಶ ಮಾಡಿ ಶ್ರೀಹರಿ ಧ್ಯಾನನಿರತರಾದರು.

ಇಂದಿಗೂ ಮುಳಬಾಗಿಲಿನಲ್ಲಿ ವೃಂದಾವನ ಮಧ್ಯದಲ್ಲಿ ರಾರಾಜಿ ಸುತ್ತಾ ಭಕ್ತವೃಂದಕ್ಕೆ ಈಪ್ಸಿತೇಷ್ಟದರಾಗಿ ಭಜಕ ಜನ ಕಾಮಧೇನುವೆನಿಸಿ ರುವ ಸನ್ಯಾಸಿ ತಿಲಕರು ನಮ್ಮ ಶ್ರೀಪಾದರಾಜರು. ನಮ್ಮ ಶ್ರೀಪಾದ ರಾಜರು, ನಮ್ಮ ವ್ಯಾಸರಾಜರು, ನಮ್ಮ ವಾದಿರಾಜರು, ನಮ್ಮ ಪುರಂದರ ದಾಸರು, ನಮ್ಮ ರಾಘವೇಂದ್ರ ಸ್ವಾಮಿಗಳು ಎಂದು ಹರಿದಾಸರ ಬಂಧು ಗಳಾಗಿ ನಾವು ಅವರೊಡನೆ ಸಮಗದ್ದುಗೆಯಲ್ಲಿ ಕೂಡುವ ಬಯಕೆಯನ್ನು ಮಾಡಬಾರದಾದರೂ, ಅವರು ನಮ್ಮ ಹಿರಿಯರು ನಾವು ಅವರ ಚರಣ ಧೂಳಿ ಎಂದು ಹೇಳಿಕೊಳ್ಳುವುದು ಹೆಮ್ಮೆಯ ಮಾತಲ್ಲವೆ?

## ನಾವು ಧನ್ಯರು

If I were asked myself from what Literature we here in Europe, we who are natured almost exclusively

on the thoughts of the Greeks and Romans of the Semetic race the Jewish, may draw that corrective which is most wanted in order to make our inner life more perfect, more universal, in fact more truely human, **a life not for this life only, but a transfigured and Eternal life, again I should point to India**

***—Maxmuler.***

ತಾತ್ಪರ್ಯ:—"ಗ್ರೀಕರೂ, ರೋಮನರೂ, ಜ್ಯೂಗಳೂ ಇವರಂತೆ ಮನಃಪ್ರವೃತ್ತಿಯುಳ್ಳ ಯುರೋಪಿನಲ್ಲಿರುವ ನಾವೂ ನಮ್ಮ ಜೀವನ ವನ್ನು ಸಾರ್ಥಕಗೊಳಿಸಿ ನಿಜವಾದ ಮಾನವತೆಯನ್ನು ಪಡೆದು **ಇಹಪರ ಗಳೆರಡರಲ್ಲೂ ಶ್ರೇಯಸ್ಸನ್ನು ಪಡೆಯಬೇಕಾದರೆ** ಏನು ಮಾಡ ಬೇಕೆಂಬುದನ್ನು ಯಾವ ಸಾಹಿತ್ಯದಿಂದ ತಿಳಿಯಬೇಕು ಎಂಬುದಾಗಿ ನನ್ನನ್ನು ಪ್ರಶ್ನೆ ಮಾಡಿದರೆ ಮತ್ತೊಮ್ಮೆ ನಾನು ಭಾರತ ಭೂಮಿಯ ಕಡೆಗೆ ಬೆರಳು ಮಾಡಿ ತೋರಿಸಬೇಕಾಗುವುದು."

**—ಮ್ಯಾಕ್ಸ್ ಮುಲ್ಲರ್.**

ಪಾಶ್ಚಿಮಾತ್ಯ ವಿದ್ವಾಂಸನಾದ ಮ್ಯಾಕ್ಸ್‌ಮುಲ್ಲರ್ ಪ್ರೊಫೆಸರನು ಇಂಡಿಯಾದಿಂದ ವಿಕ್ಟೋರಿಯಾ ರಾಣಿಯವರಿಗೆ ಬರೆದ ಪತ್ರದಲ್ಲಿ ಸ್ವಲ್ಪ ಭಾಗವಿದು. ಈ ಪತ್ರದಿಂದ ನಾವು ನಮ್ಮ ದೇಶದ ಭಾಗ್ಯ ಎಷ್ಟು ಘನ ವಾದುದೆಂದು ಊಹಿಸಬಹುದು. ವೇದ ಪುರಾಣ ಕಾಲದಿಂದ ಇಂದಿನ ವರೆಗೂ ಭಾರತೀಯರು ಜಗತ್ತಿಗೆ ವಿದ್ಯೆಯಲ್ಲಿ-ಸಂಪತ್ತಿನಲ್ಲಿ-ಗುಣದಲ್ಲಿ ಆದರ್ಶರು. ಇಲ್ಲಿ ಪರಮಾತ್ಮನ ವಿಭೂತಿ ಮತ್ ಸತ್ವದಿಂದ ಯುಕ್ತರಾಗಿ ಜನಿಸಿದ ಲಕ್ಷೋಪಲಕ್ಷ ಮಹಾತ್ಮರಿದ್ದಾರೆ. ಅವರು ತೋರಿಕೊಟ್ಟ ಮಾರ್ಗ **ಐಹಿಕ ಪಾರಮಾರ್ಥಿಕ ಸಾಧನೀಭೂತವಾದುದು. ಶ್ರೀಪಾದರಾಜ ರನ್ನು ಪುನಃ ಸ್ಮರಿಸಿ ಈ ಗ್ರಂಥವನ್ನು ಶ್ರೀಹರಿಗೆ ಅರ್ಪಿಸುತ್ತೇನೆ.**

---

# ತಿದ್ದುಪಡಿ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೨ | ೫ | ಮತ್ತು | ಮತ್ತೊ |
| ೪ | ೪ | ಭೋಕ್ಷಸೇ | ಭೋಕ್ಷ್ಯಸೇ |
| ೫ | ೧೨ | ವೇದಸುಧೆ | ವೇದಸಂತೆ |
| ೧೯ | ೧೨ | ಪಸರಿಸಿತ್ತು | ಪಸರಿಸಿತು |
| ೨೦ | ೧೪ | ಎಡೆಮಾಡಿ ಕೊಟ್ಟರು | ಎಡೆಮಾಡಿ ಕೊಟ್ಟು |
| ೨೩ | ೩ | ಈ ಧರ್ಮವನ್ನು | ಈ ಧರ್ಮಕ್ಕೆ |
| ೨೩ | ೧೯ | ಅಶ್ರದ್ಧಯಾಹುಂ | ಅಶ್ರದ್ಧಯಾ ಹುತಂ |
| ೩೧ | ೧೦ | ಪಶಿಸ್ಟ | ವಸಿಷ್ಠ |
| ೪೧ | ೧೮ | ತೋರಿ | ಕೋರಿ |
| ೪೬ | ೨೨ | ಕಾರಣ ಯಾಕೆ ವಿಷ್ಣುವೇ | ಕಾರಣ ವಿಷ್ಣುವೇ |
| ೪೮ | ೫ | ಕಡೆಗೆದಿಸುವುದು | ಕಡೆಗೈದಿಸುವುದು. |

# ಶ್ರೀ ಹರಿದಾಸ ವಿಜಯ ಪ್ರಕಾಶನ ಸಮಿತಿಯ
# ನಿಯಮಾವಳಿಗಳು



(೧) 100 ರೂಪ್ಯಾಗಳನ್ನು ಕೊಟ್ಟವರು **ಮಹಾಪೋಷಕರು** ಇವರಿಗೆ ಹರಿದಾಸ ವಿಜಯ ಪ್ರಕಾಶನ ಸಮಿತಿಯಿಂದ ಹೊರಡುವ ಎಲ್ಲಾ ಪುಸ್ತಕಗಳನ್ನು ಬಹುಮಾನರೂಪವಾಗಿ ಕೊಡಲಾಗುವುದಲ್ಲದೆ, ಪ್ರತಿ ಪುಸ್ತಕದಲ್ಲಿಯೂ ಅವರ ಹೆಸರನ್ನು ಮುದ್ರಿಸಲಾಗುವುದು.

(೨) 50 ರೂಪ್ಯಾಗಳನ್ನು ಕೊಟ್ಟವರು **ಪೋಷಕರು** ಇವರಿಗೆ ಮಾಲೆಯ ಎಲ್ಲಾ ಪುಸ್ತಕಗಳನ್ನು ಬಹುಮಾನ ರೂಪವಾಗಿ ಕೊಡುವುಪಲ್ಲದೆ, ಒಂದು ಪುಸ್ತಕದಲ್ಲಿ ಅವರ ಹೆಸರನ್ನು ಮುದ್ರಿಸಲಾಗುವುದು.

(೩) 25 ರೂಪ್ಯಾಗಳನ್ನು ಕೊಟ್ಟವರು **ಪ್ರೋತ್ಸಾಹಕರು.** ಇವರಿಗೆ ೫ ವರ್ಷಗಳಲ್ಲಿ ಈ ಮಾಲೆಯಿಂದ ಹೊರಡುವ ಎಲ್ಲಾ ಪುಸ್ತಕಗಳನ್ನು ಉಚಿತವಾಗಿ ಕೊಡಲಾಗುವುದು.

(೪) 10 ರೂಗಳನ್ನು ಕೊಟ್ಟವರು **ಸಹಾಯಕರು.** ಇವರಿಗೆ ೧ ವರ್ಷದಲ್ಲಿ ಈ ಮಾಲೆಯಲ್ಲಿ ಈ ಮಾಲೆಯಿಂದ ಹೊರಡುವ ಎಲ್ಲಾ ಪುಸ್ತಕಗಳನ್ನು ಉಚಿತವಾಗಿ ಕೊಡಲಾಗುವುದು.

ಚಂದಾದಾರರಿಗೆ ವಾರ್ಷಿಕ ಚಂದಾ ಕೇವಲ ಎಂಟಾಣೆಗಳನ್ನು ಏರಿಸಿರುವುದಕ್ಕೆ ಮನ್ನಿಸಿ. ವಾ. ಚಂದಾ—ರೂ. 3—0—0.

---

Printed at The Majestic Press, Udipi and Written & Published by H. Guru Vedavyasa Dasa, Udipi.

ನಮ್ಮ ಮಾಲೆಯಿಂದ ಈ ತನಕ ಪ್ರಕಟವಾಗಿರುವ ಪುಸ್ತಕಗಳು-

ಭಕ್ತ ಕನಕದಾಸರು †

ಭಕ್ತ ವಾದಿರಾಜರು †

ಭಕ್ತ ರಾಘವೇಂದ್ರರು

ಭಕ್ತ ಪುರಂದರ ದಾಸರು †

ಭಕ್ತ ಶ್ರೀಪಾದರಾಜರು

ಮುಂದೆ ಪ್ರಕಟವಾಗಲಿರುವ ಮೊಗ್ಗೆ

ಭಕ್ತೆ ಗಿರಿಯಮ್ಮನವರು.

ಪ್ರಕಟವಾದ ಬಿಡಿ ಪ್ರಕಟಣೆಗಳು –

ಸಮಯೋಚಿತ ಹರಿಭಜನ ಮಾಲಿಕಾ

ಶ್ರೀ ರಾಘವೇಂದ್ರ ಭಜನ ಮಾಲಿಕಾ

---

† ಪ್ರತಿಗಳು ಮುಗಿದಿವೆ